ಷಡಕ್ಷರಕವಿಯ

# ಶಬರಶಂಕರವಿಳಾಸ ಪ್ರಬಂಧಂ

(ಸಂಗ್ರಹ)

ಸಂಪಾದಕರು:

ಜಿ. ಎಸ್. ಶಿವರುದ್ರಪ್ಪ, ಎಂ. ಎ.

ಬಿ. ಎಚ್. ಶಾಸ್ತ್ರಿ, ಎಂ. ಎ.

ಪ್ರಕಾಶಕರು:

ಅಚ್ಯುತ ಸಾಹಿತ್ಯ ಮಾಲೆ,

ಮೈಸೂರು

# ಶಬರಶಂಕರವಿಳಾಸ ಪ್ರಬಂಧಂ

## (ಸಂಗ್ರಹ)

ಸಂಪಾದಕರು :

ಜಿ. ಎಸ್. ಶಿವರುದ್ರಪ್ಪ, ಎಂ.ಎ.

ಬಿ. ಎನ್. ಶಾಸ್ತ್ರಿ, ಎಂ.ಎ.

ಪ್ರಕಾಶಕರು :

ಅಚ್ಯುತ ಸಾಹಿತ್ಯ ಮಾಲೆ,

ಮೈಸೂರು



# ಪೀಠಿಕೆ

## ೧. ಕವಿಚರಿತ್ರೆ

ಶಬರಶಂಕರವಿಳಾಸ ಎಂಬ ಕನ್ನಡ ಚಂಪೂ ಕಾವ್ಯವನ್ನು ಬರೆದವನು ಶ್ರೀ ಷಡಕ್ಷರಿ. ಈತನ ಜನ್ಮಸ್ಥಳ ಮೈಸೂರು ಜಿಲ್ಲೆಯ ಮಳವಳ್ಳಿತಾಲ್ಲೂಕಿಗೆ ಸೇರಿದ ದನುಗೂರು. ಈತನು ತನ್ನ ತಂದೆ ತಾಯಿಗಳ ಹೆಸರನ್ನು ಹೇಳಿ ಕೊಳ್ಳದೆ,

> ಶಿವವಕ್ಷೋರೇಣುಪ್ರಭವನಾದ ರೇಣುಕಾಚಾರ್ಯ, ಆತನ ಪುತ್ರ ನಿಗಮಾಗಮಸಾಗರನಾದ ರುದ್ರಮುನೀಂದ್ರ, ಆತನ ವಂಶೋದ್ಭವ ನಾದ ಉದ್ಭಾನಯೋಗಿ, ಆತನ ಶಿಷ್ಯ ಅನ್ನದಾನೀಶ್ವರ, ಆತನ ಶಿಷ್ಯ ರೇವಣಸಿದ್ಧ, ಆತನ ಶಿಷ್ಯ ಚಿಕವೀರದೇಶಿಕ, ಆತನ ಶಿಷ್ಯ ತಾನು'

ಎಂದು ಗುರುಪರಂಪರೆಯನ್ನು ಮಾತ್ರ ಹೇಳಿಕೊಂಡಿರುವುದರಿಂದ ಈತನು ಗೃಹಸ್ಥನಲ್ಲವೆಂದೂ, ಸನ್ಯಾಸಿಯಾಗಿದ್ದು ವೀರಶೈವ ಪೂರ್ವಾಚಾರ್ಯ ರಲ್ಲಿ ಸುಪ್ರಸಿದ್ಧರಾದ ರೇಣುಕಾಚಾರ್ಯರ ಗುರುಸಂಪ್ರದಾಯಕ್ಕೆ ಸೇರಿ ದ್ದನೆಂದೂ ಹೇಳಬಹುದು. ಈತನು 'ಯಳಂದೂರು ಷಡಕ್ಷರ ದೇವ' ಎಂದು ಪ್ರಸಿದ್ಧನಾಗಿದ್ದಾನೆ ಕಾರಣ ಜನ್ಮಸ್ಥಳವಾದ ದನುಗೂರನ್ನು ಬಿಟ್ಟು ಯಳಂದೂರು ಗ್ರಾಮದ ಮಠಕ್ಕೆ ಸ್ವಾಮಿಯಾಗಿ ಅಲ್ಲಿಯೇ ಲಿಂಗೈ ಕ್ಯನಾದನು.

ಈತನು ತನ್ನ 'ಶಿವಾಧಿಕ್ಯ ರತ್ನಾವಳಿ', 'ಭಕ್ತಾಧಿಕ್ಯ ರತ್ನಾವಳಿ' ಎಂಬ ತನ್ನ ಗ್ರಂಥಗಳ ಕೊನೆಯಲ್ಲಿ ತಾನು 'ಬಾಲೇಂದು ಪುರವರಾಧೀಶ ಮುದ್ದು ಭೂಮಿಪನ ಕುಲಗುರು' ಎಂದು ಹೇಳಿಕೊಂಡಿದ್ದಾನೆ. ಈ ಬಾಲೇಂದು ಪುರ್ಸ್ಠೇ ಯಳಂದೂರು—ಮುದ್ದು ಭೂಮಿಪನೇ ಈತನ ಕಾಲದಲ್ಲಿ ಹದಿನಾಡಿನ ದೊರೆಯಾಗಿದ್ದ ಮುದ್ದುರಾಜ. ಈ ಮುದ್ದುರಾಜನ ಹೆಂಡತಿಯ ತೌರೂರು

ಯಳಂದೂರಿಂದೂ, ಷಡಕ್ಷರಿಯು ಮುದ್ದುರಾಜನ ರಾಣಿಯ ತೌರುಮನೆಯ ಕುಲಗುರುವಾಗಿದ್ದನೆಂದೂ, ಆ ಕಾರಣದಿಂದ ಮುದ್ದುರಾಜನು ಈತನಿಗೆ ಯಳಂದೂರಿನಲ್ಲಿ ಒಂದು ಮಠವನ್ನು ಕಟ್ಟಿಸಿಕೊಟ್ಟನೆಂದೂ ಊಹಿಸಬಹುದು.

ಷಡಕ್ಷರಿಯು ಹುಟ್ಟಿದ ಅಥವ ಲಿಂಗೈಕ್ಯನಾದ ಯಾವ ದಿನವೂ ಸರಿಯಾಗಿ ತಿಳಿದಿಲ್ಲ. ಈತನು ತನ್ನ ರಾಜಶೇಖರ ವಿಳಾಸವನ್ನು ಕ್ರಿ. ಶ. ೧೬೫೪–೫೫ ರಲ್ಲೂ ವೃಷಭೇಂದ್ರ ವಿಜಯವನ್ನು ೧೬೭೭ ರಲ್ಲೂ ರಚಿಸಿದೆನೆಂದು ಹೇಳಿಕೊಂಡಿದ್ದಾನೆ. ಆದ್ದರಿಂದ ಈತನು ಹದಿನೇಳನೇ ಶತಮಾನದ ಉತ್ತರಾರ್ಧದಲ್ಲಿದ್ದನೆಂದು ಹೇಳಬಹುದು.

ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಮೈಸೂರಿನ ಚಿಕ್ಕದೇವರಾಜ ಒಡೆಯರ ಕಾಲ ಬಹು ಮುಖ್ಯವಾದುದು. ಚಿಕ್ಕದೇವರಾಜ ಒಡೆಯರು ಸ್ವತಃ ಕವಿಗಳಾಗಿ ಅನೇಕ ಗ್ರಂಥಗಳನ್ನು ಬರೆದುದಲ್ಲದೆ ಅನೇಕ ಕವಿಗಳಿಗೂ ಆಶ್ರಯದಾತರಾಗಿದ್ದರು. ತಿರುಮಲಾರ್ಯ, ಶಿಂಗಿರಾರ್ಯ, ಚಿಕ್ಕುಪಾಧ್ಯಾಯ, ತಿಮ್ಮಕವಿ, ಮಲ್ಲಿಕಾರ್ಜುನ, ವೇಣುಗೋಪಾಲ ವರಪ್ರಸಾದ, ಮಲ್ಲರಸ, ಚಿದಾನಂದಕವಿ ಮುಂತಾದ ಕಬ್ಬಿಗರೂ, ಶೃಂಗಾರಮ್ಮ, ಹೊನ್ನಮ್ಮ ಎಂಬ ಕಬ್ಬಿಗಿತಿಯರೂ ಇವರ ಆಸ್ಥಾನದಲ್ಲಿದ್ದರು. ವಿಜಯನಗರದ ದೊರೆಗಳಲ್ಲಿ ಕೃಷ್ಣದೇವರಾಯನು ಹೇಗೋ ಮೈಸೂರರಸರಲ್ಲಿ ಚಿಕ್ಕದೇವರಾಜ ಒಡೆಯರು ಹಾಗೆ. ಇವರು ಕ್ರಿ. ಶ. ೧೬೭೨ ರಿಂದ ೧೭೦೪ ರ ವರೆಗೆ ಆಳಿದರು. ಷಡಕ್ಷರಿಯು ವೃಷಭೇಂದ್ರ ವಿಜಯವನ್ನು ಬರೆಯುವಹೊತ್ತಿಗೆ (೧೬೭೭) ಚಿಕ್ಕದೇವರಾಜರು ಮೈಸೂರನ್ನು ಆಳತೊಡಗಿ ಐದುವರ್ಷಗಳಾಗಿದ್ದುವು. ಉಭಯಭಾಷಾ ಪಂಡಿತನೆನಿಸಿ ಸಂಸ್ಕೃತ, ಕನ್ನಡ, ಎರಡು ಭಾಷೆಗಳಲ್ಲೂ ಕಾವ್ಯ ರಚಿಸಿ ಪ್ರಸಿದ್ಧನಾಗಿದ್ದ ಷಡಕ್ಷರಿಯ ಪರಿಚಯ ಚಿಕ್ಕದೇವರಾಜರಿಗೆ ಇದ್ದೇ ಇರಬೇಕು. ಆದರೆ ಷಡಕ್ಷರಿಯು ಆಸ್ಥಾನಕವಿಯಾಗಿದ್ದನೆಂದು ಹೇಳಬರುವುದಿಲ್ಲ. ಯಾವ ರಾಜರ ಹಂಗಿಗೂ ಒಳಗಾಗುವ ಮನೋವೃತ್ತಿಯುಳ್ಳ ಷಡಕ್ಷರಿಯದು. ಈತನು ತನ್ನ ಯಾವ ಕೃತಿಯಲ್ಲಿಯೂ ಯಾವ ರಾಜ

ನನ್ನೂ ಬಣ್ಣಿಸಿಲ್ಲ. ಅಲ್ಲದೆ

'ಧರೆಯೊಳ್ಕೇಣ್ಸಪ್ಪುಟ್ಟುತ್ತಿರುಳ್ಳ ನರರಮೇಲುಬೀಕರ್ಬಂಗಳಂ ಬಿತ್ತರಿಸುತ್ತಂಸಪ್ರಯಾಸಂಕೆಲಕೆಲರಕಟಾಕೆಟ್ಟುಪೋದರ್' . . .

ಎಂದೂ, ಕವಿಯು ಕಾವ್ಯದಿಂದ ಆಸಕುನಯನನನ್ನು ಪೊಗಳದೆ ಮಾನಿಸರಂ ಸ್ವರರಂ ಪೊಗಳ್ವುದು, 'ಕಸವರಮುಂಕಳೆದು ಕಸವನಾಂತವೊಲಕ್ಕುಂ' ಎಂದಿದ್ದಾನೆ.

ಕವಿಯು ತನ್ನ ಕವಿತಾ ಸಾಮರ್ಥ್ಯ ಮತ್ತು ಯೋಗ್ಯತೆಯ ಬಗ್ಗೆ ಉದಾತ್ತ ಭಾವನೆಗಳನ್ನಿಟ್ಟುಕೊಂಡು

ಬರೆಬರೆದಂತದಂ ತೊಡೆದುತೊಟ್ಟನೆ ನಿಟ್ಟಿಸಿ ಮೆಲ್ಲನೊಂದುಮಂ
ಸರಸಪದಾರ್ಥಮಂ ತಪಿಕಿ ಕಾಣದೆ ಕಳ್ದುಪರೋಕ್ತಿಯುಕ್ತಿಯಂ
ವಿರಚಿಸುತುಮಿಂತುಮಳಿಗಬ್ಬಮಂನಾಗಿಸಿಕೇಳಿಸುತ್ತೆ ಕಾ
ಲುರಿಚರತೋರ್ಪದುಷ್ಕವಿ ಮಹಾಕವಿ ಮಧ್ಯದೊಳೊಪ್ಪಲಾರ್ಪನೇ

ಎಂದು ಹೇಳಿ ತಾನಂತಹ ಅಳಿಗವಿಗಳ ಪಂಕ್ತಿಗೆ ಸೇರಿದವನಲ್ಲವೆಂದೂ "ಆಲೋಕಿತ ಕಾವ್ಯಬೃಂದದೊಳಗಿಲ್ಲದ ಮಂಜುಳ ಯುಕ್ತಿ ಪುಂಜ"ದಿಂದ ತನ್ನ ಕೃತಿಯನ್ನು ಸರಸ್ವತಿಗೆ ನವಸೀಮಂತರತ್ನವಾಗುವಂತೆ ಮಾಡಬಲ್ಲೆನೆಂದೂ ಹೇಳಿಕೊಂಡಿದ್ದಾನೆ.

ಷಡಕ್ಷರಿಗೆ ಕವಿತಾಶಕ್ತಿಯು ಚಿಕ್ಕವಯಸ್ಸಿನಲ್ಲೇ ಬಂದಿತೆಂಬುದು

ನೆರೆದೇಕಾದಶವರ್ಷದ
ಹರಯದೊಳಭವಪ್ರಸಾದಬಲದಿಂ ಕವಿತಾ
ತರುಣಿಷಡಕ್ಷರದೇವನ
ನೆರವಿಲ್ಲದೆ ವರಯಿಸಿರ್ದಳರಿದೆನೆವಿಬುಧರ್

ಎಂಬ ಪದ್ಯದಿಂದ ಗೊತ್ತಾಗುತ್ತದೆ. ಅಲ್ಲದೆ ಈ ಕವಿತಾಶಕ್ತಿಯು ತನಗೆ ಬಹುತರ ಜನ್ಮಕೋಟಿಗಳೊಳಾರ್ಜಿಸಿದುತ್ತಮ ಪುಣ್ಯದೇಟ್ಗೆಯಿಂ"

ಬಂದುದೆಂದು ನಮ್ರತೆಯಿಂದ ಹೇಳಿಕೊಂಡಿದ್ದಾನೆ. ಕವಿತಾಶಕ್ತಿಗೆ ಪೂರ್ವ ಜನ್ಮದ ಪುಣ್ಯವಷ್ಟೇ ಅಲ್ಲದೆ ಈ ಜನ್ಮದಲ್ಲಿ ಪರಮಾತ್ಮನ ಕೃಪಾದೃಷ್ಟಿಯೂ ಕಾರಣವೆಂದು ನಂಬಿದ್ದನೆಂಬುದಕ್ಕೆ ಈ ಕೆಳಗಿನ ಪದ್ಯವೇ ಸಾಕ್ಷಿಯಾಗಿದೆ.

ಅರಾರೇಜಿರ್ ಶಾಸ್ತ್ರ
ಶ್ರೀರೋಪಣಗಿರಿಯುಸಲ್ಲಿನವಕವಿತಾ ಚಿಂ
ತಾರತ್ನಂದೊರೆಗುಮೆಪಮಾ
ರಾರಿಯ ಕೃಪೆಯಿಲ್ಲದಂಗೆ ಧರಣೀತಳದೊಳ್

ಷಡಕ್ಷರಿಯು 'ವೀರಶೈವ'. ಕಾವ್ಯವನ್ನು ಬರೆವರೆ ಅಸಮನಯನನನ್ನೇ ಪೊಗಳಬೇಕು—'ಮಾನಿಸರಂ, ಸುರರಂ ಪೊಗಳ್ವುದು, ಕಸವರಮಂ ಕಳೆದು ಕಸವನಾಂತವೊಲಕ್ಕುಂ' ಎಂದು ಹೇಳಿದ್ದಾನೆ. ಈತನು ಅತ್ಯಂತ ಶಿವಭಕ್ತ. ಶಿವನಿಗೆ ಸಂಬಂಧಪಡದ ವಸ್ತು ಇವನ ಕಾವ್ಯದ ವಸ್ತುವಾಗಲಾರದು

ಆದಱಿಂದೆ ಮಹಿತ ಮಹಿಮಾ
ಸ್ಪದನಂ ಶಿವನಂ ತದೀಯ ಶರಣವ್ರಜಮಂ
ಪದೆದು ಪೊಗಳುದವೊದವೆಬಲ್ಲಂ
ಪದೆ ನುತಿಪೆಂ ನುತಿಸೆನುಳಿದ ಸುರರಂ, ನರರಂ

ಎಂದು ನಿರ್ಧರಿಸಿದ್ದಾನೆ. ಆದರೆ ಹೀಗೆ ಹಟತೊಟ್ಟು ಛಲದಿಂದ ಕಾವ್ಯ ರಚನೆ ಮಾಡಿದ್ದು ಷಡಕ್ಷರಿಯ ವಿಶಿಷ್ಟತೆಯೇನಲ್ಲ. ಹಿಂದಿನ ಕವಿಗಳಾದ ಹರಿಹರ, ರಾಘವಾಂಕ, ಚಾಮರಸ, ಸುರಂಗಕವಿ, ಎಲ್ಲರೂ ಇದೇ ದೃಷ್ಟಿಯಿಂದ, ಇದೇ ಅಭಿಪ್ರಾಯವನ್ನು ಸೂಚಿಸಿ, ಕಾವ್ಯ ಬರೆದಿದ್ದರಾಗಿ ಇದು ಹರಿಹರನಿಂದ ಬೆಳೆದುಬಂದ ಒಂದು 'ವೀರಶೈವಸಂಪ್ರದಾಯ' ವೆಂದು ಬೇಕಾದರೂ ಹೇಳಬಹುದು. ಹರಿಹರನು ತನ್ನ ಪಂಪಾಶತಕದಲ್ಲಿ

ಮನುಜರಮೇಲೆ ಸಾವವರಮೇಲೆ ಕಸಿಷ್ಮರಮೇಲೆ ಪದ್ಯಮಂ
ತನತನಗಿಂಪ್ರ ಚಂಪ್ರರಪಿಳರ್ಣಪಥೀಟ ಬಲೀಂಪ್ರನೆಂದು ತಾ

ನನವರತಂ ಪೊಗೞ್ದು ಕಿಡಬೇಡೆಲೆ ಮಾನವ ಸೀನಪರ್ನಿಶಂ
ನೆನೆಪೊಗೞರ್ಚಿಸೆನ್ನು ಕಡುಸೊಂಪಿನ ಪೆಂಪಿನ ಪಂಪೆಯಾಳ್ದನಂ

ಎಂದು ಹೇಳಿದ್ದಾನೆ

ವೀರಶೈವ ಕವಿಗಳಲ್ಲಿ ಈ ಒಂದು ಸಂಪ್ರದಾಯವಿದ್ದುದರಿಂದಲೇ ಅವರು ಹೆಚ್ಚಾಗಿ ರಾಜಾಸ್ಥಾನಗಳನ್ನು ಸೇರಿ ಪಂಡಿತರಿಗೆ ಮಾತ್ರ ತಕ್ಕುದಾದ ಕಾವ್ಯವನ್ನು ಬರೆಯದೆ ಜನಸಾಮಾನ್ಯರನ್ನೇ ತಮ್ಮ ದೃಷ್ಟಿಯಲ್ಲಿಟ್ಟು ಕೊಂಡು ಅವರಿಗೆ ಅರ್ಥವಾಗುವಂತೆ ಸುಲಭವಾಗಿ ಕಾವ್ಯ ರಚಿಸಿ ಕನ್ನಡ ಸಾಹಿತ್ಯಕ್ಕೆ ಹೆಚ್ಚು ಸೇವೆಯನ್ನು ಸಲ್ಲಿಸಿದ್ದಾರೆ

ಷಡಕ್ಷರಿಯು ಉಭಯ ಭಾಷಾಪಂಡಿತ. ಈತನಿಗೆ 'ಉಭಯ ಭಾಷಾ ವಿಶಾರದ' ಎಂಬ ಬಿರುದಿತ್ತು. ಇವನು ಸಂಸ್ಕೃತದಲ್ಲಿ 'ಕವಿಕರ್ಣರಸಾಯನ' ಎಂಬ ಮಹಾ ಕಾವ್ಯವನ್ನೂ, 'ಶಿವಾಧಿಕ್ಯ ರತ್ನಾವಳಿ' 'ಭಕ್ತಾಧಿಕ್ಯ ರತ್ನಾವಳಿ' 'ಶಿವಸ್ತವ ಮಂಜರಿ' 'ಸೀಲಾಂಬಿಕಾ ಸ್ತೋತ್ರ' ಇವೇ ಮುಂತಾದ ಹಲವು ಸ್ತೋತ್ರಗಳನ್ನೂ ರಚಿಸಿದ್ದಾನೆ. ಕನ್ನಡದಲ್ಲಿ 'ರಾಜ ಶೇಖರ ವಿಳಾಸ' 'ವೃಷಭೇಂದ್ರವಿಜಯ' 'ಶಬರಶಂಕರವಿಳಾಸ' ಎಂಬ ಮೂರು ಚಂಪೂ ಗ್ರಂಥಗಳನ್ನು ರಚಿಸಿದ್ದಾನೆ. ಈತನಿಗೆ ಸಂಸ್ಕೃತಕ್ಕಿಂತ ಲೂ ಕನ್ನಡದಲ್ಲಿಯೇ ಅಭಿಮಾನ ಹೆಚ್ಚು. 'ಮೊದಲಗ್ಗದ ಸಕ್ಕದಮಿರೆ ಕನ್ನಡ ಮುದಯಿಸಿ ರಂಜಿಸದೆ ಕರ್ಣಕಮನೀಯತೆಯಿಂ' ಎಂದು ಹೇಳಿ ದ್ದಾನೆ.

೧. ರಾಜಶೇಖರವಿಳಾಸ - ಇದೇ ಈತನ ಪ್ರಥಮ ಕೃತಿ. ಇದರ ವಸ್ತು ವನ್ನು ಗುಬ್ಬಿಯ ಮಲ್ಲಣಾರ್ಯನ ಭಾವ ಚಿಂತಾರತ್ನದಿಂದ ತೆಗೆದುಕೊಂಡಿ ರುವುದಾಗಿ ಕವಿಯೇ ಹೇಳಿದ್ದಾನೆ. ಪಂಚಾಕ್ಷರೀ ಮಂತ್ರದ ಮಹಿಮೆ ಯನ್ನು ಬಣ್ಣಿಸುವುದೇ ಈ ಕಥೆಯ ಉದ್ದೇಶ. ಸತ್ಯೇಂದ್ರ ಚೋಳನ ಮಗ ನಾದ 'ರಾಜಶೇಖರನೇ' ಕಾವ್ಯದ ಕಥಾನಾಯಕ. ಇದು ಮಹಾ ಕಾವ್ಯದ ಎಲ್ಲ ಲಕ್ಷಣಗಳನ್ನೂ ಹೊಂದಿದೆ ಅಷ್ಟಾದಶವರ್ಣನೆಗಳೂ ಬರು

ತ್ತವೆ. ನೇಮಿಚಂದ್ರನ 'ಲೀಲಾವತಿ' ಎಂಬ ಕನ್ನಡ ಚಂಪೂ ಕಾವ್ಯವು ಅತ್ಯಂತ ರಸಭರಿತವಾದ ಕಾವ್ಯವೆಂದು ಕೇಳಿದಾಗ ಷಡಕ್ಷರಿಯು ಇನ್ನೊಂದು ವರ್ಷದಲ್ಲಿ ಅದಕ್ಕಿಂತಲೂ ಮಿಗಿಲಾದ ಕಾವ್ಯವನ್ನು ರಚಿಸುವುದಾಗಿ ಹಟತೊಟ್ಟು ರಾಜಶೇಖರವಿಳಾಸವನ್ನು ಬರೆದನೆಂಬ ಜನಜನಿತವಾದ ಕಥೆಯೊಂದಿದೆ. ಇದೇ ರೀತಿಯ ಕಥೆಯು ಷಡಕ್ಷರಿ, ಲಕ್ಷ್ಮೀಶ, ರುದ್ರ ಭಟ್ಟ ಇವರಿಗೆ ಸಂಬಂಧಪಟ್ಟಂತೆಯೂ ಇದೆ. ಆದರಿವೆಲ್ಲ ನಂಬಿಕೆಗೆ ಅರ್ಹವಾದುವಲ್ಲ. ಒಟ್ಟಿನಲ್ಲಿ ಈ ಕಾವ್ಯವು ಬಹು ವಿದ್ವತ್ಪೂರ್ಣವಾಗಿ ಶೃಂಗಾರದ ಅತಿರೇಕದಿಂದಲೂ ವರ್ಣನಾಬಾಹುಳ್ಯದಿಂದಲೂ ಕೂಡಿದೆ.

ವೃಷಭೇಂದ್ರವಿಜಯ—ಇದು ವೀರಶೈವ ಮತಪ್ರಚಾರಕರಾದ ಬಸವಣ್ಣನವರ ಚರಿತ್ರೆ. ಪಾಲ್ಕುರಿಕೆಯ ಸೋಮನಾಥ ಕವಿಯ ಆಂಧ್ರ ಬಸವ ಪುರಾಣ, ಅದರ ಕನ್ನಡ ಅನುವಾದವಾದ ಭೀಮಕವಿಯ 'ಬಸವ ಪುರಾಣ' ಇವು ಈ ವೃಷಭೇಂದ್ರ ವಿಜಯದ ಆಧಾರ ಗ್ರಂಥಗಳು. ಇದರಲ್ಲಿ ಕೆಲವು ಸಣ್ಣ ಮಾರ್ಪಾಟುಗಳೂ ಉಂಟು. ಇದು ರಾಜಶೇಖರ ವಿಳಾಸದಷ್ಟು ಶೃಂಗಾರಾತಿರೇಕದಿಂದಾಗಲೀ, ವರ್ಣನಾಬಾಹುಳ್ಯದಿಂದಾಗಲೀ ಕೂಡಿಲ್ಲ. ಇಲ್ಲಿ ಬರುವ ಬಸವಣ್ಣನವರ ಕಥೆಗಿಂತಲೂ ನಡುವೆ ಬರುವ ಉಪಕಥೆಗಳಲ್ಲಿ ಸ್ವಾರಸ್ಯ ಹೆಚ್ಚು. ಸಿರಿಯಾಳಸೆಟ್ಟಿ, ಕೋಳೂರು ಕೊಡಗೂಸು, ಹೇರೂರು ಹೆಗ್ಗೂಸು ಈ ಕಥೆಗಳಲ್ಲಿ ಕವಿಯ ಪ್ರತಿಭೆ ಚೆನ್ನಾಗಿ ಕಾಣುತ್ತದೆ. ಕಥಾ ಸರಣಿ ಸರಳವಾಗಿದೆ, ಮಾತು ಹಿತಕರವಾಗಿದೆ, ವರ್ಣನೆ ಮಿತವಾಗಿದೆ, ಸಂದರ್ಭಕ್ಕೆ ತಕ್ಕಂತೆ ಭಾವಾವೇಶಗಳ ತೀವ್ರತೆಯಿದೆ. ಷಡಕ್ಷರಿ ಒಳ್ಳೆಯ ಕವಿ ಎಂಬುದಕ್ಕೆ ಇವು ಸಾಕ್ಷಿಯಾಗಿವೆ.

ಶಬರಶಂಕರವಿಳಾಸ—ಇದು ಷಡಕ್ಷರಿಯ ಮೂರನೇ ಕೃತಿ. ಲಘು ಕಾವ್ಯಗಳ ಮಾಲಿಕೆಯಲ್ಲಿ ಸೇರತಕ್ಕುದಾಗಿದೆ, ಗಾತ್ರದ ದೃಷ್ಟಿಯಿಂದ. ಇದರ ವಸ್ತು ಸುಪ್ರಸಿದ್ಧವಾದುದು. ಅರ್ಜುನನು ಶಿವನನ್ನು ಮೆಚ್ಚಿಸಿ ಪಾಶುಪತಾಸ್ತ್ರವನ್ನು ಪಡೆದುದು. ಮಹಾಭಾರತದಿಂದ ಒಂದು ಆಶ್ವಾಸವನ್ನು ಆರಿಸಿಕೊಂಡದ್ದು. ಹೀಗೆ ಮಹಾಭಾರತದಿಂದ ವಸ್ತುವನ್ನು

ಆಯ್ದುಕೊಂಡ ವೀರಶೈವರಲ್ಲಿ ಷಡಕ್ಷರಿಯೇ ಮೊದಲನೆಯವನು. ಇದು ಶಿವನ ಪಂಚವಿಂಶತಿಲೀಲೆಗಳಲ್ಲಿ ಒಂದಾಗಿರುವುದರಿಂದಲೂ, ಶಿವಪಾರಮ್ಯವನ್ನು ಸಾರುವುದರಿಂದಲೂ ಷಡಕ್ಷರಿಯು ಈ ಭಾಗವನ್ನು ಆಯ್ದುಕೊಂಡಿದ್ದಾನೆ. ಇಲ್ಲಿ ಅರ್ಜುನನ ಪಾತ್ರ ಗೌಣ. ಶಿವನೇ ಪ್ರಧಾನ ಪಾತ್ರ. ಭಾರವಿಯ ಕಿರಾತಾರ್ಜುನೀಯ, ಶಿವಪುರಾಣ, ವ್ಯಾಸ ಭಾರತ ಪಂಪ ಭಾರತ, ಕುಮಾರವ್ಯಾಸಭಾರತ, ವಿರೂಪಾಕ್ಷಪಂಡಿತನ ಚನ್ನಬಸವ ಪುರಾಣ ಇವುಗಳಲ್ಲಿ ಬರುವ ಇದೇ ಕಥೆ ಷಡಕ್ಷರಿಗೆ ಮೂಲವಾಗಿರಬೇಕು. ಷಡಕ್ಷರಿಯುದರಲ್ಲಿ ಶಿವಮಹಿಮಾ ಸಂಕೀರ್ತನೆ ಹೆಚ್ಚು. ಇದು ಭಕ್ತಿರಸ ಪ್ರಧಾನವಾದ ಕಾವ್ಯ.

## ೨. ಕಥಾಗರ್ಭ

### ೧

ಸಮುದ್ರಮುದ್ರಿತ ಸುವರ್ಣ ಭೂಧರವು ಬೆಟ್ಟದಾವರೆಯಂತೆ ಪ್ರಕಾಶಿಸುತ್ತಿತ್ತು. ಅಲ್ಲಿನ ಮರಗಳೆಲ್ಲಾ ಕಲ್ಪವೃಕ್ಷಗಳು. ಕಲ್ಲೆಲ್ಲಾ ಪರುಷಮಣಿಗಳು. ನಿರ್ಝರವೆಲ್ಲಾ ಸುಧೆ. ಧೇನುವೆಲ್ಲಾ ಕಾಮಧೇನು. ವನೇಚರರೆಲ್ಲಾ ಖಚರರು. ಲತೆಯೆಲ್ಲಾ ಕಲ್ಪವಲ್ಲಿ. ಹೀಗೆ ಸಂಪದಭಿವೃದ್ಧಿಯಿಂದ ಪ್ರಕಾಶಿಸುತ್ತಿತ್ತು. ಅಲ್ಲಿಯ ವನಗಳಲ್ಲಿ ಅಪ್ಸರೆಯರ ಗಾನರಸಾಸ್ವಾದನೆಯಿಂದ ಮೃಗಪಕ್ಷಿಗಳೂ ಸಹ ತಮ್ಮನ್ನು ತಾವೇ ಮರೆತು ಆ ಗಾನದಲ್ಲಿ ತಲ್ಲೀನವಾಗದ್ದುವು. ಆ ಪರ್ವತದ ಸಾನು ಪ್ರದೇಶವು ಕಿನ್ನರ ಕಿಂಪುರುಷರ ವಿನೋದಸ್ಥಳ, ವಿಹಾರಸ್ಥಳ. ಅಲ್ಲಿಯ ವನಗಳಲ್ಲಿ ದುಂಬಿಗಳು ಸದಾ ಹಾಡುತ್ತಲೂ ಪಾರಿವಾಳಗಳು ಕೇಕೆ ಹಾಕುತ್ತಲೂ ನವಿಲುಗಳು ಗರಿಗೆದರಿ ನಾಟ್ಯವಾಡುತ್ತಲೂ ಇದ್ದು ವಿಯೋಗಿಗಳ ಮನಸ್ಸನ್ನು ಪೀಡಿಸುತ್ತಿದ್ದುವು. ಹೀಗೆ ಪ್ರಕಾಶಿಸುತ್ತಿದ್ದ ಆ ಕನಕಾಚಲದಗ್ರದಲ್ಲಿ ಬಂಗಾರದ ದ್ವಾರವುಳ್ಳ ಪುರವೈರಿಯ ಕೈಲಾಸವು ಆಕಾಶವನ್ನು ಮುಟ್ಟುವ ವೃಷಧ್ವಜದಿಂದಲೂ, ಉಪ್ಪರಿಗೆಗಳಿಂದ ಕೂಡಿದ ಮನೆಗಳಿಂದಲೂ, ಶಿವಭಕ್ತರ ಮನೆಯ ಸಾಲು

ಗಳಿಂದಲೂ ವಿರಾಜಿಸುತ್ತಿತ್ತು. ಆ ಕೈಲಾಸವನ್ನು ಅಷ್ಟ ದಿಕ್ಕುಗಳಲ್ಲಿಯೂ ಪರಾಕ್ರಮಿಗಳಾದ ಅಷ್ಟ ಭೈರವರು ಕಾಯುತ್ತಿದ್ದರು. ಆ ಕೈಲಾಸದ ಮಧ್ಯದಲ್ಲಿ ಒಂದು ಕೋಟಿ ಯೋಜನ ವಿಸ್ತಾರವಾದ ಶಿವನ ಓಲಗಶಾಲೆಯಿತ್ತು. ಆ ಓಲಗ ಶಾಲೆಯು ಪಚ್ಚೆಯ ಜಗುಲಿಯಿಂದಲೂ ಮಾಣಿಕ್ಯದ ಮಂಟಪಗಳಿಂದಲೂ, ನೀಲರತ್ನದ ಕಂಬಗಳಿಂದಲೂ, ಮನೋಹರವಾದ ನೆಲಗಟ್ಟಿನಿಂದಲೂ, ರತ್ನ ಹವಳಗಳ ತೊಲೆಗಳಿಂದಲೂ ಪುಷ್ಯರಾಗದ ಮೇಲ್ಗಟ್ಟಿನಿಂದಲೂ, ಮುತ್ತಿನ ಕಲಶಗಳಿಂದಲೂ ವಜ್ರದ ಕವಾಟದಿಂದಲೂ ಪ್ರಕಾಶಿಸುತ್ತಿತ್ತು. ಅದರ ನಡುವೆ ಅನಲರವಿಶಶಿಕೋಟಿಗಳ ಪ್ರಕಾಶವನ್ನು ಕೀಳ್ಮಾಡಿ ವಿಪುಲ ಪ್ರಭಾಮಂಡಲದಿಂದ ಕೂಡಿ, ಪದ್ಮಪೀಠದಲ್ಲಿ ಚಿದಚಿತ್ಪ್ರೇರಕನೂ, ಅನಘನೂ, ವೇದಾಂತನೂ, ಕಲಾಸ್ಪದನೂ, ಆದ್ಯಂತ ವಿದೂರನೂ, ವಿಶ್ವಮೂರ್ತಿಯೂ, ದಯಾವಾರ್ಧಿಯೂ, ಪ್ರಂಪಚದ ಸೃಷ್ಟಿ ಸ್ಥಿತಿಲಯಕಾರನೂ, ಭೋಗ ಮೋಕ್ಷಪ್ರದಾಯಕನೂ ಆದ ಪರಶಿವನು ಕೆಂಜಡೆಯಿಂದಲೂ, ಚಂದ್ರಲೇಖೆಯಿಂದಲೂ, ಹಣೆಗಣ್ಣಿನಿಂದಲೂ, ಫಣಿಕುಂಡಲದಿಂದಲೂ, ಗಜಚರ್ಮದಿಂದಲೂ, ನೀಲಕಂಠದಿಂದಲೂ ಶೋಭಿಸುತ್ತಿದ್ದನು. ಕಣ್ಣಿನ ಕಾಂತಿಯು ಬೆಳದಿಂಗಳಿನಂತೆಯೂ, ಆಭರಣಗಳ ಕಾಂತಿಯು ಚೆಂಬಿಸಿಲಿನಂತೆಯೂ ಹೊಳೆಯುತ್ತಿದ್ದು ದೇವತೆಯರೆಲ್ಲಾ ಸೇವಿಸುತ್ತಿರಲು ಆದ್ರಿಜೆಯು ಶಿವನ ತೊಡೆಯಮೇಲೆ ಆಸೀನಳಾಗಿ ಪ್ರಕಾಶಿಸುತ್ತಿದ್ದಳು. ಆ ತ್ರಿಶೂಲಿಯ ಆಸ್ಥಾನದಲ್ಲಿ ಹಾಡುವ ಕಿನ್ನರರೂ ನರ್ತಿಸುವಪ್ಸರೆಯರೂ, ಜಯಧ್ವನಿಗೆಯ್ಯುವ ಚಂಡಕೀರ್ತಿಗಳೂ, ನಮಸ್ಕರಿಸುವ ತಾಪಸರೂ, ಕಾಣಿಕೆಯಿಕ್ಕುವ ನಿರ್ಜರರೂ ಕಿಕ್ಕಿರಿದಿದ್ದರು. ಇವರುಗಳ ಮಧ್ಯೆ ಮುಕ್ತಿಯ ಮುಗುಳಂತೆ, ನಿತ್ಯತೆಯ ನಿಲವಿನಂತೆ, ಪರಿಪೂರ್ಣತೆಯ ಪರಮಸೀಮೆಯಂತೆ, ಕರುಣೆಯ ಕಡಲಂತೆ ಸರ್ವದೇವತಾ ಸಾರ್ವಭೌಮನಾದ ಭೋಗಿವಿಭೂಷನು ಒಪ್ಪಿದ್ದನು.

೨

ಶಿವನು ತನ್ನ ಒಡ್ಡೋಲಗದಲ್ಲಿ ಕುಳಿತಿರುವಾಗ ಅಸ್ತವ್ಯಸ್ತರಾಗಿ, ನಿಟ್ಟು

ಸಿರುಬಿಡುತ್ತಾ ನಡುಗುತ್ತಿರುವ ತಾಪಸರ ಗುಂಪೊಂದು ಬಂದು ಸಭಾಂತ ರಾಳದಲ್ಲಿ ರತ್ನಜ್ಯೋತಿಯಂತಿದ್ದ ಉಮಾರಮಣನಿಗೆ ಸಾಷ್ಟಾಂಗ ಪೂರ್ವಕ ವಾಗಿ ನಮಸ್ಕರಿಸಿ, 'ಸನಕಾದ್ಯರ್ಕಳಮಾನಸಾಂಬುಜಮರಾಳಾ, ವೇದಾಂತವನಸುಕರಾಜಾ, ವಿಶ್ವಾರಾಧ್ಯಾ, ಅಂಧಕಾಸುರಸೂಧನಾ, ಸರ್ವದೇವತಾ ರಕ್ಷಕಾ, ಜಗತ್ಕರ್ತಾರಾ, ಮಾಯಾರಹಿತಾ, ಘನತೇಜೋರಾಶಿಪೂರ್ಣಾ, ಸಚ್ಚಿದಾನಂದರೂಪಾ, ಹರಿವಿಧಿಗಳಿಗೂ ವೇದಾಳಿಗೂಅಭೇದ್ಯಾ' ಎಂದು ಗಿರಿಶನನ್ನು ನಾನಾಪ್ರಕಾರವಾಗಿ ಪ್ರಾರ್ಥಿಸಲು ಸರ್ವಜ್ಞನು ಕರುಣಾ ಕಟಾಕ್ಷದಿಂದ ನೋಡಿ—"ಯಾವ ಗಿರಿಯಲ್ಲಿ ನಿಮ್ಮ ತಪೋವನ? ಆ ಪ್ರದೇಶವನ್ನು ನೀವು ಬಿಟ್ಟು ಇಲ್ಲಿಗೆ ಬರಲು ಕಾರಣವೇನು? ನಿಮಗುಂಟಾಗಿರುವ ಆಪತ್ತೇನು"? ಎಂದು ಏನೂ ಅರಿಯದವನಂತೆ ಕೇಳಿದನು. ಆಗ ಒಬ್ಬ ಪ್ರಗಲ್ಭತಾಪಸನು ದೈನ್ಯದಿಂದ—"ದೇವಾ, ಮುನಿಗಳ ಬೀಡು, ಮುಕ್ತಿಯ ತವರ್ಮನೆ, ಮಹಾಘನಸುರಸಿದ್ಧಚಾರಣರ ಚಾವಡಿಯೆನ್ನಿಸಿದ ಇಂದ್ರಕೀಲಾಚಲೇಂದ್ರವೇ ನಮ್ಮ ತಪೋಕ್ಷೇತ್ರ. ಆ ಪ್ರದೇಶವು ನಾನಾ ಜಾತಿಯ ಮರ, ಗಿಡ, ಬಳ್ಳಿ, ಚಿಗುರು, ಹೂವು ಫಲಗಳಿಂದ ತುಂಬಿ ಕೋಗಿಲೆ, ಗಿಣಿ, ದುಂಬಿ ಇವುಗಳ ಇಂಚರದಿಂದ ಕೂಡಿ, ಸರೋಜದಿಂದ ಕೂಡಿದ ಸರೋವರಗಳಿಂದಲೂ, ಮಂದಮಾರುತನಿಂದಲೂ ಕಂಗೊಳಿಸುತ್ತಿದೆ. ಅಲ್ಲಿಯ ಮುನಿಗಳ ತಪಃಪ್ರಭಾವದಿಂದ ರವಿಯು ಹೆಚ್ಚು ಬಿಸಿಲನ್ನೂ ಬೀರನು, ಕಾಳ್ಕಿಚ್ಚೂಮೆಯ್ದೋರದು, ಗಾಳಿಯೂ ತೀವ್ರವಾಗಿ ಬೀಸದು. ಯಮನೂ ಸಹ ಅವರ ಬಳಿ ಸಾರಲು ಹೆದರುವನು. ಅಲ್ಲಿಯ ತಪಸ್ವಿಗಳು ಸದಾಮೃಡಧ್ಯಾನಾಮೃತಾಸ್ವಾದನೆಯನ್ನು ಪಡೆಯುತ್ತಾ ನಿಶ್ಚಳತೆಯಿಂದ ಒಪ್ಪಿದ್ದರು. ಪಾಪ ವಿಮುಕ್ತರಾದ ಶುಕ, ಮಾರ್ಕಂಡೇಯ, ಬೋಧಾಯನ, ಕಪಿಲ, ಕಣಾದ, ಅಕ್ಷಪಾದ, ಅತ್ರಿ, ಮೈತ್ರೇಯ, ಕಣ್ವ, ಆಗಸ್ತ್ಯ, ಪರಾಶರ, ಭೃಗು, ವಾಲ್ಮೀಕಿ, ಶೌನಕ, ವಿಶ್ವಾಮಿತ್ರ, ಧೌಮ್ಯ, ಚ್ಯವನ, ದಮನ, ಶಾತಾತಪ, ಪೂರ್ಣಭದ್ರ ಇವರೇ ಮೊದಲಾದ ಮುನೀಂದ್ರರು ಅಲ್ಲಿ ನಿಶ್ಚಿಂತೆಯಿಂದಿರಲಾಗಿ ಆ ಪ್ರದೇಶಕ್ಕೆ ಕಿರೀಟಾನ್ವಿತನೂ, ಮೃದುಸ್ಮಿತ ವಕ್ತ್ರನೂ ಆದ ಸುಂದರನೊಬ್ಬನು ಬಿಲ್ಲುಬಾಣಗಳನ್ನು ಹಿಡಿದು ಬಂದು

ವಿದ್ಯುಕ್ತವಾಗಿ ಸ್ನಾನಮಾಡಿ, ಶೈವವ್ರತವನ್ನು ಕೈಕೊಂಡು, ವಿಭೂತಿ ರುದ್ರಾಕ್ಷಿಗಳನ್ನು ಧರಿಸಿ, ಶಿವಧ್ಯಾನಕ್ಕಾಗಿ ಬಿಲ್ವವೃಕ್ಷದ ಕೆಳಗೆ ನಿಂತಾಗ 'ತಪಸ್ಸಿಗೆ ಯೋಗ್ಯವಾದ ಸ್ಥಳ. ಇಲ್ಲಿಯೇ ನಿಲ್ಲು' ಎಂಬ ಗಗನ ಗಂಭೀರ ವಾಣಿಯನ್ನು ಕೇಳಿ ಉತ್ಸಾಹದಿಂದ ಆ ವೃಕ್ಷದ ಕೆಳಗೆ ನಿಂತು ತಪಸ್ಸಿಗಾರಂಭಿಸಿದನು.

ಆಗ ಆ ಹೊಸ ತಪಸ್ವಿಯ ಬಳಿಗೆ ಇಂದ್ರನು ಬ್ರಾಹ್ಮಣ ವೇಷತಾಳಿ ಬಂದು ಆತನನ್ನು ಕುರಿತು 'ನಿನ್ನ ಕಯ್ಯಲ್ಲಿರುವ ಜಪಮಾಲೆಯೆಲ್ಲಿ, ಎಸೆವ ಕತ್ತಿಯೆಲ್ಲಿ- ಧರಿಸಿದ ವಿಭೂತಿಯೆಲ್ಲಿ ಹೆದೆಯೇರಿಸಿದ ಧನುಸ್ಸೆಲ್ಲಿ. ಘನಶಾಂತಿಯೆಲ್ಲಿ ನಿನ್ನ ಭೀಕರ ವೇಷವೆಲ್ಲಿ, ಏನೀ ಅದ್ಭುತ. ಇದುವರೆಗೆ ನಾನು ಎಷ್ಟೋ ತಾಪಸರನ್ನು ಕಂಡಿದ್ದೇನೆ ಆದರೆ ನಿನ್ನುಪಮೆಯ ಕಿತ್ತಡಿಯ ನೆಲ್ಲಿಯುಂ ಕಂಡಱಿಯೆಂ' ಎನ್ನಲು ಆತನು 'ಹೊರಮಯ್ಯ ವೇಷ ಹೇಗಿದ್ದರೇನು ? ನಾನು ನನ್ನ ಮಾನಸಾಬ್ಜಾಂತರದೊಳ್ ಕಱಿಗೊರಲನಂಘ್ರಿದಳೆದು ಧ್ಯಾನಿಸಿ ಈಶನನ್ನು ಮೆಚ್ಚಿಸುತ್ತೇನೆ.' ಎನ್ನಲಾಗಿ ಇಂದ್ರನು 'ಎಲೈ ತಪಸ್ವಿಯೇ ನೀನಾದರೋ ಅತಿಸುಖಿ. ಅಂತಹ ನೀನು ಅಭೀಳತಪಸ್ಸನ್ನೆಂತೆಸಗುವೆ ? ಅಲ್ಪ ವ್ರತಕ್ಕೆ ಶಿವನು ಒಲಿಯುವನೇ ? ಹೆಳವನು ಮರದ ತುದಿಯ ಹಣ್ಣನ್ನು ಬಯಸಿ ತನಗಸಾಧ್ಯವಾದ ಕೆಲಸಕ್ಕೆ ತೊಡಗಿ ಜನರ ನಗೆಗೆ ಪಕ್ಕಾಗುವುದಿಲ್ಲವೇ ?' ಎನ್ನಲು ತಪಸ್ವಿಯು 'ಶಿವನೇನೋ ದುರ್ಲಭ. ಆದರೂ ಭಕ್ತಿಸಂಧಾನಕ್ಕೆ ಆತ ಅಸಾಧ್ಯನಲ್ಲ. ಸ್ಥಿರಭಕ್ತಿಭಾವದಿಂದ ಶಂಕರನನ್ನು ಮೆಚ್ಚಿಸುತ್ತೇನೆ. ಹಾಗಿಲ್ಲದಲ್ಲಿ ನನ್ನ ಪ್ರಾಣವನ್ನೇ ಕೊಡಲು ಸಿದ್ಧನಿದ್ದೇನೆ' ಎಂದು ತನ್ನ ಪ್ರತಿಜ್ಞೆಯನ್ನು ತಿಳಿಸಲು ಆತನ ನಿಷ್ಠೆ ಮತ್ತು ಸದ್ಭಕ್ತಿಗೆ ಇಂದ್ರನು ಮೆಚ್ಚಿ ತನ್ನ ನಿಜ ರೂಪನ್ನು ತೋರಿ ಆತನನ್ನು ಹರಸಿ ಸ್ವರ್ಗಕ್ಕೆ ನಡೆದನು.

ಸೂಕ್ಷ್ಮರೂಪನೂ, ಅಪ್ರಮೇಯನೂ, ಮುನಿಜನಮಾನಸಾಮಳ ಸರೋವರ ಹಂಸನೂ ಚಿದಚಿತ್ಪ್ರಪಂಚನೂ, ಚಿತ್ಪ್ರಕಾಶಕನೂ ಆದ ಶಿವ

ನನ್ನು ತಪಸ್ವಿಯು ಧ್ಯಾನಿಸತೊಡಗಿದನು. ಮೊದಲ ತಿಂಗಳು ಮೂರುದಿನ ಕ್ಕೊಂದುಬಾರಿ ಫಲಭಕ್ಷಣ ಮಾಡುತ್ತಲೂ, ಎರಡನೆಯ ತಿಂಗಳು ಆರುದಿನ ಕ್ಕೊಂದುಬಾರಿ ಹಣ್ಣನ್ನು ತಿನ್ನುತ್ತಲೂ, ಮೂರನೆಯ ತಿಂಗಳು ಕಂದ ಮೂಲಫಲ, ನಾಲ್ಕನೇ ತಿಂಗಳು ಜೀರ್ಣಪರ್ಣ, ಐದನೇ ತಿಂಗಳು ಗಾಳಿ ಇವನ್ನೇ ಸೇವಿಸುತ್ತಾ ತಪಸ್ಸನ್ನು ಮುಂದುವರೆಸಿ ಸದಾಶಿವ ಪಾದ ವನ್ನು ಧ್ಯಾನಿಸುತ್ತಾ ಒಳಗೂ ಹೊರಗೂ ಅಂತಃ ಜ್ಯೋತಿಯಿಂದ ಶಿವಂತಾ ನಾದನೋ ಎನ್ನುವ ರೀತಿಯಲ್ಲಿ ಒಪ್ಪಿದ್ದನು. ಈತನ ತಪಃಪ್ರಭಾವದಿಂದ ಭೂಮಿಯೆಲ್ಲಾ ಕಾಯ್ದಿತು, ದಿಕ್ಪತಿಗಳು ಅಂಜಿದರು, ದೇವತೆಗಳು ನಡುಗಿ ದರು, ಪರ್ವತಗಳು ಕಾಯ್ದುವು, ಸಮುದ್ರವು ಕುಗ್ಗಿತು, ಸೂರ್ಯಚಂದ್ರರ ಪ್ರಭೆ ಎಲ್ಲೋ ಅಡಗಿತು. ಇದರಿಂದ ಅಲ್ಲಿನ ತಪೋಧನರ ಧೈರ್ಯ ಉಡು ಗಿತು. ಈಶಧ್ಯಾನ ಕುಗ್ಗಿತು, ಸ್ಮರಣೆಯು ಜಾರಿತು, ಜಪಾನುಷ್ಠಾನವಿಲ್ಲ ವಾಯಿತು, ಸದ್ವ್ರತವು ನಾಶವಾಯಿತು, ವೇದಾಂತೋಪನಿಷತ್ ಜ್ಞಾನ ವು ಅಳುಕಿತು. ಆದ್ದರಿಂದ ಆತನಿಂದುಂಟಾದ ಉಪದ್ರವವನ್ನು ಕಳೆದು ನಮ್ಮನ್ನು ಕಾಪಾಡು" ಎಂದು ಪ್ರಗಲ್ಭತಾಪಸನು ಪ್ರಾರ್ಥಿಸಲು 'ಆ ತಪೋ ಧನನು ಯಾರೆಂಬ ಶಂಕೆಬೇಡ. ಜಗತ್ರಯಖ್ಯಾತನೂ, ಇಂದ್ರಸೂನುವೂ, ಮುಕುಂದನ ಮೈದುನನೂ ಆದ ಅರ್ಜುನನೇ ಅವನು. ನಿಮ್ಮ ಭಾಗ್ಯವ ನ್ನೇನೂ ಅವನು ಆಶಿಸುವುದಿಲ್ಲ, ಹೆದರಬೇಡಿ' ಎಂದು ಹೇಳಿ ಶತ್ರುದಮ ನಾರ್ಥವಾಗಿಇಂದ್ರಕೀಲಕ್ಕೆ ಹೋಗಿ ಗಿರೀಶನಿಂದ ಪಾಶುಪತಾಸ್ತ್ರವನ್ನು ಪಡೆಯೆಂದು ವ್ಯಾಸಋಷಿಗಳು ಹೇಳಲಾಗಿ ಅದರಂತೆ ಅರ್ಜುನನು ತಪಸ್ಸ ನ್ನಾಚರಿಸುತ್ತಿದ್ದಾನೆ. ಆತನ ಅಭೀಷ್ಟದಂತೆ ಪಾಶುಪತಾಸ್ತ್ರವನ್ನಿತ್ತು ಆತನ ತಪಸನ್ನೂ ಆ ತಪಸ್ಸಿನ ಉಪದ್ರವವನ್ನೂ ಕಳೆದು ನಿಮ್ಮ ಮನೋರಥವಿತ್ತು ರಕ್ಷಿಪೆಂ ಎಂದು' ಅಭಯವಿತ್ತು ತಾಪಸವೃಂದವನ್ನು ಬೀಳ್ಕೊಟ್ಟನು.

೩

ಪರಶಿವನು ಬೇಟೆಯ ನೆಪದಿಂದ ಇಂದ್ರಕೀಲಾಚಲಪೆಡೆಗೆ ಹೋಗ

ಟನು. ಗಣಾಳಿಗಳೂ, ಸುರರೂ ಅಮಿತ ಸಂಭ್ರಮದಿಂದ ಭೇರಿನಿನಾದ ವೆಸಗತೊಡಗಿದರು. ಶಿವನು ಪುಳಿಂದ ವೇಷವನ್ನು ಧರಿಸಿದನು. ಆತನ ಜಟೆಯೇ ಚಿಗುರತಲೆಗಟ್ಟಿನಂತೆಯೂ, ಫಣಿಯೇ ಬಳ್ಳಿಯಂತೆಯೂ, ಶಿರೋಗಂಗೆಯೇ ಪುಷ್ಪಗುಚ್ಛದಂತೆಯೂ, ಅರ್ಧಚಂದ್ರನೇ ಗರಿಯಂತೆಯೂ, ಹುಲಿಚರ್ಮವೇ ಚಲ್ಲಣದಂತೆಯೂ, ಗಜಚರ್ಮವೇ ಕರಿಯ ಉತ್ತರೀಯದಂತೆಯೂ, ಹಣೆಯ ವಿಭೂತಿಯೇ ಪುಷ್ಪಪರಾಗದಂತೆಯೂ ಹಣೆಗಣ್ಣೇ ಫಣಾಲೇಪನದಂತೆಯೂ, ಪಾರ್ವತಿಯ ಅರ್ಧಾಂಗವೇ ಇಂದ್ರನೀಲ ಕಾಂತಿಯಂತೆಯೂ ಶೋಭಿಸುತ್ತಿತ್ತು. ಭಿಲ್ಲಿಯ ವೇಷವನ್ನು ಧರಿಸಿದ ಪಾರ್ವತಿಗೆ ಸಂಜೆಗೆಂಪು ತಳಿರುಡೆಯಂತೆಯೂ, ನಕ್ಷತ್ರಗಳು ಮುತ್ತಿನ ಹಾರದಂತೆಯೂ, ಶರೀರದ ಕಪ್ಪು ಕತ್ತಲೆಯಂತೆಯೂ, ಶುಕ್ರಬಿಂಬವೇ ಮೂಗುತಿಯಂತೆಯೂ ಹೊಳೆದು ಆಕೆಯ 'ಕಾಳರಾತ್ರಿ' ಎಂಬ ಹೆಸರನ್ನು ಸಾರ್ಥಕಗೊಳಿಸುತ್ತಿತ್ತು. ದೇವತಾಸ್ತ್ರೀಯರೆಲ್ಲತೂ ದಂತವೋಲೆ, ಗುರುಗುಂಜಿಯ ಸರ, ಹೊಂಗೇಚಿಗುರಿನ ಉಡುಪು, ನವಿಲುಗರಿಯ ನಿರಿಗಟ್ಟು, ನೈದಿಲೆಯ ಮಾಲೆ, ಹುಳುವಿನ ಹಚ್ಚೆಬೊಟ್ಟು, ಹಸುರು ಪಾದರಿಯ ದಂಡೆ ಇವನ್ನು ಧರಿಸಿ ಪುಳಿಂದಿಯರಂತೆ ಪ್ರಕಾಶಿಸುತ್ತಿದ್ದರು. ಇವರು ತಲೆಗೆ ತಳಿರನ್ನೂ, ಸಂಪಿಗೆಯ ಕರ್ಣಾಭರಣ, ಬೆಟ್ಟದಾವರೆಯ ಕಾಂಚಿ, ಮಕರಂದದ ಬೊಟ್ಟು, ಬೆನ್ನಮೇಲೆ ಕೂದಲಿನ ಎಣ್ಣೆಗಂಟು, ಕೈಯಲ್ಲಿ ಬಿಲ್ಲುಬಾಣ, ಪುಷ್ಪಮಾಲೆ, ಗಜದಂತ ಇವನ್ನು ಹಿಡಿದು ವಿರಾಜಿಸುತ್ತಿದ್ದರು. ಸಿಡಿಲನ್ನು ಪುಡಿಗೆಯ್ಯುವ, ಆದಿಶೇಷನನ್ನು ಹಿಡಿಯುವ ಪ್ರಳಯಾಗ್ನಿಯನ್ನು ತಿಕ್ಕಿ ಬೊಟ್ಟಿಡುವ, ಭೂವ್ಯೋಮಾಕಾಶಗಳನ್ನು ತಾಳಗಳಾಗಿಸಬಲ್ಲ, ದೊಡ್ಡಸಮುದ್ರವನ್ನೇ ಹೀರುವ, ಕುಲಪರ್ವತಗಳನ್ನೇ ಚೆಂಡಾಡುವ ಸೂರ್ಯನನ್ನೇ ಬೆರಳಿನಿಂದ ಮಿಡಿಯುವ, ಪರಾಕ್ರಮಶಾಲಿಗಳಾದ ಗಣಾಧಿಪರು ಶಿವನೊಡನೆ ಬಂದರು. ಆಕಾಶದಲ್ಲಿ ಆದ ನಗಾರಿ, ಶಂಖ, ಇವುಗಳ ರವವು ಬೆಟ್ಟಗಳಿಗೆ ತಾಕಿ ಪ್ರತಿಧ್ವನಿಸಿದುವು. ರತಿಭಾರ್ಗವಿಯರೇ ಮೊದಲಾದವರು ಚಿನ್ನದ ಹರಿವಾಣದಲ್ಲಿ ಶಿವಪಾರ್ವತಿಯರಿಗೆ ಆರುತಿ ಬೆಳಗಿದರು. ಬೇಟೆಗಾಗಿ ನಾನಾ ರೀತಿಯ ಬಲೆಗಳೂ, ನಾನಾ ರೀತಿಯ

ಬಿಲ್ಲು ಬಾಣ ಆಯುಧಗಳೂ, ಸಿದ್ಧವಾದುವು. ಶಿವನು ಗಿರಿಜೆ ಮತ್ತು ಗಣಗಳೊಡಗೂಡಿ ಇಂದ್ರಕೀಲ ಕುತ್ಕೀಲಕಟಕದ ಪೇರಡವಿಯನ್ನು ಹೊಕ್ಕನು. ಅದು ಬಹು ಕತ್ತಲೆಯಿಂದ ಕೂಡಿದ್ದುದರಿಂದ ದವಶಿಖಿ ಮುತ್ತುಗದ ಹೂವು, ಮೋಡ ಮದ್ದಾನೆ ಗಂಡ ಶೈಲ, ಇವುಗಳ ವ್ಯತ್ಯಾಸವೇ ಅರಿವಾಗುತ್ತಿರಲಿಲ್ಲ. ದೀಪದ ಬಳ್ಳಿಯಿಂದ ಉಂಟಾಗುವ ಕಾಂತಿ ಮತ್ತು ಸರ್ಪಗಳ ಫಣಾಮಣಿಯ ಕಾಂತಿ ಇವು ಹೊರತು ಚಂದ್ರಸೂರ್ಯರ ಬೆಳಕು ಆ ಕಾಡನ್ನು ಪ್ರವೇಶಿಸದಾಗಿತ್ತು. ಅದು ನಾನಾ ಪ್ರಕಾರವಾದ ದೊಡ್ಡ ದೊಡ್ಡ ಮರಗಳಿಂದ ಕೂಡಿ ರವಿಶಶಿಕರಂಗಳೆಡೆಯಾಟಕ್ಕೂ ಅವಕಾಶ ಕೊಡದೆ ತಮದ ತವರ್ಮನೆಯೆನಿಸಿತ್ತು. ಅಲ್ಲದೆ ಅದು ವಿಚಿತ್ರತರ ಖಗ ಮೃಗಂಗಳ ಆವಾಸಸ್ಥಾನವೂ ಆಗಿತ್ತು.

ಆ ಘನಗಹ್ವರದಲ್ಲಿ ಕಿರಾತಗಣಗಳು ಬೇಟೆಯಾಡುವ ಸಂಭ್ರಮದಿಂದ ಅಬ್ಬರಿಸುತ್ತಾ ಕಾಡಿನಲ್ಲೆಲ್ಲಾ ಓಡಾಡಿ ಸಿಂಹ, ಕಾಡಾನೆ, ವರಾಹ ಇವುಗಳು ಓಡಾಡಿದ ಬಟ್ಟೆಯನ್ನು ಪರೀಕ್ಷಿಸುತ್ತಾ ಅಬ್ಬರಿಸುತ್ತಾ ಮೊಲ, ಹುಲ್ಲೆ, ಕೋಣ, ಆನೆ, ಹುಲಿ ವರಾಹ, ಸಿಂಹ ಇವುಗಳ ಬೇಟೆಯಾಡ ತೊಡಗಿದರು. ಇವರಬ್ಬರವನ್ನು ಕೇಳಿ ಹೆದರಿದ ಮೃಗ ಪಕ್ಷಿಗಳು ದಿಕ್ಕಾಪಾಲಾಗಿ ಓಡಿದುವು. ಭಿಲ್ಲಿಯರೂ ಸಹ ಬಿಲ್ಲಿಗೆ ಬಾಣಹೂಡಿ ಮೃಗ ಬೇಟೆಯಾಡ ತೊಡಗಿದರು. ಒಬ್ಬ ಉಗ್ರಲುಬ್ಧಕನು ತನ್ನ ಮೇಲೆ ಬಿದ್ದ ಹುಲಿಯೊಂದನ್ನು ಅಲ್ಲೇ ತುಂಡಾಗಿ ಕತ್ತರಿಸಿದನು. ಮತ್ತೊಬ್ಬ ಪುಳಿಂದನು ತನ್ನ ನಿಶಿತ ಖಡ್ಗದಿಂದ ಪರ್ವತೋಪಮಾನವಾದ ಒಂದು ಕಾಡುಕೋಣನ ಗೋಣ್ ಮುರಿದನು. ಮತ್ತೊಬ್ಬನು ನಡೆದುಬರುವ ಅಂಜನ ಪರ್ವತದಂತಿದ್ದ ಆನೆಯ ಕುಂಭಸ್ಥಳವನ್ನು ಚಂದ್ರಾಯುಧದಿಂದ ಸೀಳಿ ರಕ್ತದ ಕೋಡಿಯನ್ನೇ ಹರಸಿದನು. ಮತ್ತೊಬ್ಬನು ಅತಿಭಯಂಕರವಾದ ಸಿಂಹವೊಂದರ ಶಿರವನ್ನು ತರಿದಿಕ್ಕಿದನು. ಹೀಗೆ ಬೇಡಬೇಡಿತಿಯರು ಅನೇಕ ಪ್ರಕಾರದಲ್ಲಿ ಬೇಟೆಯಾಡುತ್ತಿರಲು ಫಾಲನೇತ್ರನುಮಂದಾರ ವೃಕ್ಷದ ಕೆಳಗಿನ ಚಂದ್ರಕಾಂತಶಿಲೆಯ ಪೀಠದ ಮೇಲೆ ಕುಳಿತು ಹೂಗೊಂಚಲೊಂದನ್ನು ಕೈಯಲ್ಲಿ ಹಿಡಿದು ಆಗಾಗ್ಗೆ ಆಘ್ರಾಣಿಸುತ್ತಿರಲು ಪಾರ್ವತಿ

ಟನು. ಗಣಾಳಿಗಳೂ, ಸುರರೂ ಅಮಿತ ಸಂಭ್ರಮದಿಂದ ಭೇರಿನಿನಾದ ಮೆಸಗತೊಡಗಿದರು. ಶಿವನು ಪುಳಿಂದ ವೇಷವನ್ನು ಧರಿಸಿದನು. ಆತನ ಜಟೆಯೇ ಚಿಗುರತಲೆಗಟ್ಟಿನಂತೆಯೂ, ಫಣಿಯೇ ಬಳ್ಳಿಯಂತೆಯೂ, ಶಿರೋ ಗಂಗೆಯೇ ಪುಷ್ಪಗುಚ್ಛದಂತೆಯೂ, ಅರ್ಧಚಂದ್ರನೇ ಗರಿಯಂತೆಯೂ, ಹುಲಿಚರ್ಮವೇ ಚಲ್ಲಣದಂತೆಯೂ, ಗಜಚರ್ಮವೇ ಕರಿಯ ಉತ್ತ ರೀಯದಂತೆಯೂ, ಹಣೆಯ ವಿಭೂತಿಯೇ ಪುಷ್ಪಪರಾಗದಂತೆಯೂ ಹಣೆ ಗಣ್ಣೇ ಫಣಾಲೇಪನದಂತೆಯೂ, ಪಾರ್ವತಿಯ ಅರ್ಧಾಂಗವೇ ಇಂದ್ರನೀಲ ಕಾಂತಿಯಂತೆಯೂ ಶೋಭಿಸುತ್ತಿತ್ತು. ಭಿಲ್ಲಿಯ ವೇಷವನ್ನು ಧರಿಸಿದ ಪಾರ್ವತಿಗೆ ಸಂಜೆಗೆಂಪು ತಳಿರುಡೆಯಂತೆಯೂ, ನಕ್ಷತ್ರಗಳು ಮುತ್ತಿನ ಹಾರದಂತೆಯೂ, ಶರೀರದ ಕಪ್ಪು ಕತ್ತಲೆಯಂತೆಯೂ, ಶುಕ್ರಬಿಂಬವೇ ಮೂಗುತಿಯಂತೆಯೂ ಹೊಳೆದು ಆಕೆಯ 'ಕಾಳರಾತ್ರಿ' ಎಂಬ ಹೆಸರನ್ನು ಸಾರ್ಥಕಗೊಳಿಸುತ್ತಿತ್ತು. ದೇವತಾಸ್ತ್ರೀಯರೆಲ್ಲತೂ ದಂತವೋಲೆ, ಗುರು ಗುಂಜಿಯ ಸರ, ಹೊಂಗೇಚಿಗುರಿನ ಉಡುಪು, ನವಿಲುಗರಿಯ ನಿರಿಗಟ್ಟು, ನೈದಿಲೆಯ ಮಾಲೆ, ಹುಳುವಿನ ಹಚ್ಚೆಬೊಟ್ಟು, ಹಸುರು ಪಾದರಿಯ ದಂಡೆ ಇವನ್ನು ಧರಿಸಿ ಪುಳಿಂದಿಯರಂತೆ ಪ್ರಕಾಶಿಸುತ್ತಿದ್ದರು. ಇವರು ತಲೆಗೆ ತಳಿರನ್ನೂ, ಸಂಪಿಗೆಯ ಕರ್ಣಾಭರಣ, ಬೆಟ್ಟದಾವರೆಯ ಕಾಂಚಿ, ಮಕರಂದದ ಬೊಟ್ಟು, ಬೆನ್ನಮೇಲೆ ಕೂದಲಿನ ಎಣ್ಣೆಗಂಟು, ಕೈಯಲ್ಲಿ ಬಿಲ್ಲುಬಾಣ, ಪುಷ್ಪಮಾಲೆ, ಗಜದಂತ ಇವನ್ನು ಹಿಡಿದು ವಿರಾಜಿಸುತ್ತಿದ್ದರು. ಸಿಡಿಲನ್ನು ಪುಡಿಗೆಯ್ಯುವ, ಆದಿಶೇಷನನ್ನು ಹಿಡಿಯುವ ಪ್ರಳ ಯಾಗ್ನಿಯನ್ನು ತಿಕ್ಕಿ ಬೊಟ್ಟಿಡುವ, ಭೂಮ್ಯಾಕಾಶಗಳನ್ನು ತಾಳಗಳಾ ಗಿಸಬಲ್ಲ, ದೊಡ್ಡಸಮುದ್ರವನ್ನೇ ಹೀರುವ, ಕುಲಪರ್ವತಗಳನ್ನೇ ಚೆಂಡಾ ಡುವ ಸೂರ್ಯನನ್ನೇ ಬೆರಳಿನಿಂದ ಮಿಡಿಯುವ, ಪರಾಕ್ರಮಶಾಲಿಗಳಾದ ಗಣಾಧಿಪರು ಶಿವನೊಡನೆ ಬಂದರು. ಆಕಾಶದಲ್ಲಿ ಆದ ನಗಾರಿ, ಶಂಖ, ಇವುಗಳ ರವವು ಬೆಟ್ಟಗಳಿಗೆ ತಾಕಿ ಪ್ರತಿಧ್ವನಿಸಿದುವು. ರತಿಭಾರ್ಗವಿಯರೇ ಮೊದಲಾದವರು ಚಿನ್ನದ ಹರಿವಾಣದಲ್ಲಿ ಶಿವಪಾರ್ವತಿಯರಿಗೆ ಆರುತಿ ಬೆಳಗಿದರು. ಬೇಟೆಗಾಗಿ ನಾನಾ ರೀತಿಯ ಬಲೆಗಳೂ, ನಾನಾ ರೀತಿಯ

ಬಿಲ್ಲು ಬಾಣ ಆಯುಃಧಗಳೂ, ಸಿದ್ಧವಾದುವು. ಶಿವನುಃ ಗಿರಿಜೆ ಮತ್ತು ಗಣಗಳೊಡಗೂಡಿ ಇಂದ್ರಕೀಲ ಕುತ್ಕೀಲಕಟಕದ ಪೇರಡವಿಯನ್ನು ಹೊಕ್ಕನು. ಅದು ಬಹು ಕತ್ತಲೆಯಿಂದ ಕೂಡಿದ್ದುದರಿಂದ ದವಶಿಖಿ ಮುತ್ತುಗದ ಹೂವು, ಮೋಡ ಮದ್ದಾನೆ ಗಂಡ ಶೈಲ, ಇವುಗಳ ವ್ಯತ್ಯಾಸವೇ ಅರಿವಾಗುತ್ತಿರಲಿಲ್ಲ. ದೀಪದ ಬಳ್ಳಿಯಿಂದ ಉಂಟಾಗುವಕಾಂತಿ ಮತ್ತು ಸರ್ಪಗಳ ಫಣಾಮಣಿಯ ಕಾಂತಿ ಇವು ಹೊರತು ಚಂದ್ರಸೂರ್ಯರ ಬೆಳಕು ಆ ಕಾಡನ್ನು ಪ್ರವೇಶಿಸದಾಗಿತ್ತು. ಅದು ನಾನಾ ಪ್ರಕಾರವಾದ ದೊಡ್ಡ ದೊಡ್ಡ ಮರಗಳಿಂದ ಕೂಡಿ ರವಿಶಶಿಕರಂಗಳೆಡೆಯಾಟಕ್ಕೂ ಅವಕಾಶ ಕೊಡದೆ ತಮದ ತವರ್ಮನೆಯೆನಿಸಿತ್ತು. ಅಲ್ಲದೆ ಅದು ವಿಚಿತ್ರತರ ಖಗ ಮೃಗಂಗಳ ಆವಾಸಸ್ಥಾನವೂ ಆಗಿತ್ತು.

ಆಘನಗಹ್ವರದಲ್ಲಿ ಕಿರಾತಗಣಗಳು ಬೇಟೆಯಾಡುವ ಸಂಭ್ರಮದಿಂದ ಅಬ್ಬರಿಸುತ್ತಾ ಕಾಡಿನಲ್ಲೆಲ್ಲಾ ಓಡಾಡಿ ಸಿಂಹ, ಕಾಡಾನೆ, ವರಾಹ ಇವುಗಳು ಓಡಾಡಿದ ಬಟ್ಟೆಯನ್ನು ಪರೀಕ್ಷಿಸುತ್ತ ಅಬ್ಬರಿಸುತ್ತಾ ಮೊಲ, ಹುಲ್ಲೆ, ಕೋಣ, ಆನೆ, ಹುಲಿ ವರಾಹ, ಸಿಂಹ ಇವುಗಳ ಬೇಟೆಯಾಡ ತೊಡಗಿದರು. ಇವರಬ್ಬರವನ್ನು ಕೇಳಿ ಹೆದರಿದ ಮೃಗ ಪಕ್ಷಿಗಳು ದಿಕ್ಕಾಪಾಲಾಗಿ ಓಡಿದುವು. ಭಿಲ್ಲಿಯರೂ ಸಹ ಬಿಲ್ಲಿಗೆ ಬಾಣಹೂಡಿ ಮೃಗ ಬೇಟೆಯಾಡ ತೊಡಗಿದರು. ಒಬ್ಬ ಉಗ್ರಲುಬ್ಧಕನು ತನ್ನ ಮೇಲೆ ಬಿದ್ದ ಹುಲಿಯೊಂದನ್ನು ಅಲ್ಲೇ ತುಂಡಾಗಿ ಕತ್ತರಿಸಿದನು. ಮತ್ತೊಬ್ಬ ಪುಳಿಂದನು ತನ್ನ ನಿಶಿತ ಖಡ್ಗದಿಂದ ಪರ್ವತೋಪಮಾನವಾದ ಒಂದು ಕಾಡುಕೋಣನ ಗೋಣ್ ಮುರಿದನು. ಮತ್ತೊಬ್ಬನು ನಡೆದುಬರುವ ಅಂಜನ ಪರ್ವತದಂತಿದ್ದ ಆನೆಯ ಕುಂಭಸ್ಥಳವನ್ನು ಚಂದ್ರಾಯುಧದಿಂದ ಸೀಳಿ ರಕ್ತದ ಕೋಡಿಯನ್ನೇ ಹರಸಿದನು. ಮತ್ತೊಬ್ಬನು ಅತಿಭಯಂಕರವಾದ ಸಿಂಹವೊಂದರ ಶಿರವನ್ನು ತರಿದಿಕ್ಕಿದನು. ಹೀಗೆ ಬೇಡಬೇಡಿತಿಯುರು ಅನೇಕ ಪ್ರಕಾರದಲ್ಲಿ ಬೇಟೆಯಾಡುತ್ತಿರಲು ಫಾಲನೇತ್ರನುಮಂದಾರ ವೃಕ್ಷದ ಕೆಳಗಿನ ಚಂದ್ರಕಾಂತಶಿಲೆಯ ಪೀಠದ ಮೇಲೆ ಕುಳಿತು ಹೂಗೊಂಚಲೊಂದನ್ನು ಕೈಯಲ್ಲಿ ಹಿಡಿದು ಆಗಾಗ್ಯೆ ಆಘ್ರಾಣಿಸುತ್ತಿರಲು ಪಾರ್ವತಿ

ಯು ಎಳೆಯ ಚಿಗುರಿನ ಬೀಸಣಿಗೆಯನ್ನು ಹಿಡಿದು ಹೆಚ್ಚು ಪ್ರೀತಿಯಿಂದ ಬೀಸುತ್ತಿದ್ದಳು.

೪

ಇಂದ್ರಕೀಲ ಪರ್ವತದ ತಪ್ಪಲಲ್ಲಿದ್ದ ಅತಿ ಬಲಿಷ್ಠನಾದ ಮೂಕದಾನ ವನೆಂಬೊಬ್ಬನು ನಿರ್ಜರ ಪ್ರತತಿಯ ಅಬ್ಬರವನ್ನು ಕೇಳಿ ಇವರನ್ನೆಲ್ಲಾ ತಿನ್ನಲು ಹವಣಿಸಿ ಉಗ್ರವರಾಹ ರೂಪದಾಳಿ ಹೊರಟನು. ಕೊಂಬಿಲ್ಲದ ಯಮನ ಕೋಣವೋ, ಸೊಂಡಿಲಿಲ್ಲದ ಗಜಾಸುರನೋ, ಅಥವಾ ಸಂಚರಿಸುವ ಅಂಜನಾದ್ರಿಯೋ ಎನ್ನುವಂತೆ ಆ ಹಂದಿಯು ಕಾಣುತ್ತಿತ್ತು. ಅದರ ಕಣ್ಣು ಒಡಬಾಗ್ನಿಯ ಕಿಡಿಯಂತೆಯೂ, ಅದರ ಕುಡುದಾಡೆಯು ಚಕ್ರದ ಉಭಯ ಪಾರ್ಶ್ವದಂತೆಯೂ, ಅದರ ಧ್ವನಿಯು ಬಲ್‌ಸಿಡಿಲಿನಂತೆಯೂ, ಶರೀರವು ಪ್ರಳಯಕಾಲದ ಮೇಘದಂತಯೂ ಇತ್ತು. ಅದರ ಖುರಘಾತದಿಂದ ಶಿಲೆಗಳು ಪುಡಿಯಾಗುತ್ತಿದ್ದುವು, ಅದರ ಸೋಂಕಿನಿಂದ ಮರಗಳು ಉರುಳಿ ಬೀಳುತ್ತಿದ್ದುವು, ಅದರ ಗರ್ಜನೆ ಪರ್ವತದಿಂದ ಪ್ರತಿಧ್ವನಿಸುತ್ತಿತ್ತು. ಅದನ್ನು ಕಂಡ ಬೇಡಗಣಗಳು ಹೆದರಿ 'ಅಯ್ಯೋ ಬೇಡರೆಲ್ಲರನ್ನೂ ಆಪೋಶನಗೊಳ್ಳಲು ಮೃತ್ಯುವೇ ವರಾಹ ರೂಪತಾಳಿ ಬಂದಿತು!' ಎಂದು ಅಬ್ಬರಿಸಿ ಅದನ್ನ ಶಸ್ತ್ರಾಸ್ತ್ರದಿಂದ ಹೊಡೆಯಲು ಹವಣಿಸಿದರು. ಇವರಬ್ಬರವನ್ನು ಕೇಳಿದ ವರಾಹವು ಹೆಚ್ಚು ಕೋಪಾಟೋಪದಿಂದ ಘುಡುಘುಡಿಸುತ್ತಾ ಕಣ್ಣಿನಲ್ಲಿ ಕಿಡಿಸೂಸುವಂತೆ ಪುಳಿಂದರನ್ನು ದಿಟ್ಟಿಸಿತು ಬೇಡರು ಬಿಟ್ಟ ಬಾಣಗಳನ್ನೂ ಬೇಟೆನಾಯಿಗಳನ್ನೂ ಎದುರಿಸಿ ಕ್ಷಣದಲ್ಲಿ ತುಂಡರಿಸಿ, ದೊಡ್ಡ ಬಲೆಯನ್ನು ಕತ್ತರಿಸಿ ಎದುರಿಸಿದ ಧೀವರಾಮರರನ್ನು ಸೀಳತೊಡಗಿತು. ಅಮರಲುಬ್ಧಕರೂ ಸಹ ಹೆಚ್ಚು ಧೈರ್ಯದಿಂದ ಅದನ್ನು ಸುತ್ತುವರಿದು ಬಾಣಬಿಡಲುಪಕ್ರಮಿಸಲು ಘೋರವರಾಹನು ಅಲ್ಲೆಲ್ಲಾ ಸುತ್ತಾಡಿದಾಡೆಗಡಿದು ಪುಟವೇಳುವಂತೆ ಭೂಮಿಯನ್ನು ಒದೆದು ಮುಖವನ್ನು ಝಾಡಿಸಿ, ಸಿಡಿಲಿನಂತೆ ಘರ್ಜಿಸಿ ತನ್ನ ದಾಡೆಗಳಿಂದ ಅವರ ಶರೀರವನ್ನು ಎರಡು ಹೋಳಾಗುವಂತೆ ಸೀಳಿ ಅದನ್ನು ಕೊರೆದು ತಿಂದು ತೇಗು

ತ್ತಿತ್ತು. ಪುಳಿಂದರು ಎಚ್ಚ ಬಾಣಗಳೆಲ್ಲಾ ಆದರ ಚರ್ಮದಿಂದ ಅತಿ ಕ್ರಮಿಸಲಾರದೆ ಅಲ್ಲೇ ಚುಚ್ಚಿಕೊಳ್ಳುತ್ತಿರಲು ಆ ಬಾಣಗಳಿಂದ ಕೂಡಿದ ಅದು ಮುಳ್ಳುಹಂದಿಯಂತೆ ತೋರುತ್ತಿತ್ತು. ಈ ವರಾಹನ ಹಾವಳಿಯನ್ನು ತಾಳಲಾರದೆ ಓಡುತ್ತಿರುವ ಅಮರ ವ್ಯಾಧರನ್ನು ಕಂಡು ಕರುಣಾಮಯನು ಅವರಿಗೆ ಧೈರ್ಯ ಹೇಳಿ, ಮೃತರಾದವರಿಗೆ ಅಸುವಿತ್ತು ತನ್ನ ಪ್ರಚಂಡ ಕೋದಂಡಕ್ಕೆ ಹೆದೆಯೇರಿಸಿ ನಿಶಿತ ಮಾರ್ಗಣವನ್ನು ಹೂಡಿ ಬಲದಲ್ಲಿಯೂ ಆಕಾರದಲ್ಲಿಯೂ ಗಜಾಸುರ ವ್ಯಾಘ್ರಾಸುರರಿಗೆ ಇಮ್ಮಡಿಯಾದ ವರಾಹನನ್ನು ತಾನೇ ಕೊಲ್ಲುವೆನೆಂದು ಬಾಣಬಿಟ್ಟನು. ಅದು ನಾಟಿದೊಡನೆಯೇ ಅದರ ಶರೀರದಿಂದ ರಕ್ತಪ್ರವಾಹವು ಸುರಿಯಲು ಕಂಗಣ್ಣುಬ್ಬಿದ ವರಾಹನು ಅಲ್ಲೇ ಮೂರ್ಛೆಹೋಗಿ, ಕ್ಷಣಮಾತ್ರದಲ್ಲೇ ಎಚ್ಚೆದ್ದು ಮಡು, ಗಿಡು, ಸರು, ದರಿ, ಹಳ್ಳ ಮೆಳೆ ಬಳ್ಳಿ, ಪೊದರು, ಬೆಟ್ಟವೆನ್ನದೆ ವೇಗವಾಗಿ ಓಡತೊಡಗಿತು. ಶಿವನು ಅದನ್ನೇ ಹಿಂಬಾಲಿಸಿದನು. ಆ ವರಾಹವು ಅರ್ಜುನನಿದ್ದ ವನವನ್ನು ಪ್ರವೇಶಿಸಲು ಹಿಂದೆ ಬರುತ್ತಿದ್ದ ಆ ಸುರ ಕಿರಾತರಬ್ಬರವನ್ನು ಕೇಳಿ ಬನದ ತಪಸ್ವಿಗಳ್ಗುಪಹತಿಯಂಗೆಯ್ಯುದಿದಂತವಿಪುದೆನಗೆ ಕರ್ತವ್ಯವೆಂದು ತನ್ನ ಕ್ಷಾತ್ರಧರ್ಮವನ್ನು ಬಗೆದು ಆ ಹಂದಿಗೆ ಗುರಿಯಿಟ್ಟು ಬಾಣಬಿಡಲು ಆ ಹಂದಿಯು ಸತ್ತುಬಿದ್ದಿತು. ಹಿಂಬಾಲಿಸಿ ಬರುತ್ತಿದ್ದ ಶಂಕರನು ತಾನು ಆ ಹಂದಿಯನ್ನು ಹೊಡೆದವನೆನ್ನಲು ಕೋಪಗೊಂಡ ಅರ್ಜುನನು ಆ ಬೇಡನು ಶಿವನೆಂದರಿಯದೆ 'ಎಲೆ ಶಬರ ಕಾಡಬಡನರಿ, ಹುಲ್ಲೆ, ಮೊಲಗಳಲ್ಲಿ ನಿನ್ನ ಬಲ ಮೆರೆಯುವುದೇ ಹೊರತು ಅರಿಬಲಾಹಕ ಪ್ರಸ್ಫುರಿತಮಹಾನಿಲನಾದ ನನ್ನೊಡನೆ ಏನೂ ಪ್ರಯೋಜನವಿಲ್ಲ' ಎಂದನು. ಶಿವನು ನಕ್ಕು ಆತನ ಧೈರ್ಯ, ಶೌರ್ಯವನ್ನು ಶಿವೆಗೆ ಸೂಚಿಸಿ ನಂತರ ಅರ್ಜುನನನ್ನು ಕುರಿತು 'ಗೊರವಾ ನಿನ್ನ ಶೌರ್ಯವಂತಿ ಶಲಿ, ನಿನ್ನ ಧನುಃಖಡ್ಗವೆಲ್ಲಿ ತಪವೆಲ್ಲಿ. ಇದೆಲ್ಲಿಯ ಚಿತ್ರ' ಎಂದು ಕಟೂಕ್ತಿಯಿಂದ ಕೇಳಲು ''ಪುಳಿಂದ ನಿನ್ನದುರುಕ್ತಿಯನ್ನು ಬಿಡು. ಜಟಾಮೃಗಾಜಿನ ಸ್ಫುಟಭಸಿತಂಗಳಂ ಶರಶರಾಸನ ಖಡ್ಗಮನಾಂತು ತಾಪಸೋಽಶ್ವರನಾದ ನೃಡನೇ ಇರುವಾಗ ಆತನ ಶಿಷ್ಯನಾದ ನನಗದು ಒಪ್ಪದೇ. ನೀನು ನನ್ನೊಡನೆ

Funding: Tattva Heritage Foundation,Kolkata. Digitization: eGangotri.



ಯುದ್ಧಕ್ಕೆ ಸಮಾನನೇ ತೊಲಗು" ಎನ್ನಲು ಶಿವನು 'ನಿನ್ನ ತಪೋನೀತಿ ಹೇಗಾದರೂ ಇರಲಿ ಧನುರ್ವಿದ್ಯಾನಿಪುಣತೆಯನ್ನು ತೋರು' ಎಂದು ಯುದ್ಧಕ್ಕೆ ಸಿದ್ಧನಾದನು. ಅರ್ಜುನನೂ ಸಹ ತಪಸ್ಸನ್ನು ಅಲ್ಲಿಗೇನಿಲ್ಲಿಸಿ ಧನುರ್ಬಾಣವನ್ನು ಹಿಡಿದೆದ್ದು ಅತಿ ಕೋಪಾಟೋಪದಿಂದ ಗಾಂಡೀವ ವನ್ನು ಠೇಂಕರಿಸಿ ಶಿವನಮೇಲೆ ಶರವೃಷ್ಟಿಯನ್ನು ಕರೆದನು. ಭೂದಿಗಂತ ಗಳು ಅರ್ಜುನನ ಬಾಣದಿಂದ ಕಾಣದಾಗಿ ಬಾಣಾವಳಿಗಳು ಶಿವನನ್ನು ಮುತ್ತಿದುವು. ಮಂಜಿನ ಪುಂಜಕ್ಕೆರವಿಯು ಹೇಗೆ ಹಿಂಜರಿಯುವುದಿಲ್ಲವೋ, ಪತಂಗಕ್ಕೆ ದಾವಾಗ್ನಿಯು ಹೇಗೆ ಬೆದರುವುದಿಲ್ಲವೋ, ವಾತಕ್ಕೆ ಗಿರಿಯು ಹೇಗೆ ನಡುಗುವುದಿಲ್ಲವೋ ಹಾಗೆ ಶಿವನು ಅಧೀರನಾಗಿದ್ದನು. ಇದನ್ನು ಕಂಡ ಗಣಪನು ಅರ್ಜುನನ ಮೇಲೆ ಕೋಪಿಸಿ ಕೆರಳಿದನು. ಗುಹನು ರೋಷಗೊಂಡನು. ಗಣಾಳಿ ಗರ್ಜಿಸಿತು. ಆಗ ಕರುಣಾಬ್ಧಿಯಾದ ಶಂಕರನು 'ಇವನು ನನ್ನ ಭಕ್ತ. ಈತನೊಳಾಂಪವಿನೋದವುಂಟು. ಆದ್ದ ರಿಂದ ನೀವು ನಿಶ್ಚಳತೆಯಿಂದಿರಿ', ಎಂದು ಸಮಾಧಾನಪಡಿಸಿದನು.

೫

ಶಿವನು ಪ್ರಚಂಡ ಧನುರ್ದಂಡಕ್ಕೆ ಬಾಣ ಹೂಡಿ ನರನೆಚ್ಚ ಕಣೆಗಳ ನ್ನೆಲ್ಲಾ ನಡುವೆಯೇ ಕತ್ತರಿಸಿಬಿಟ್ಟನು. ಇದರಿಂದ ಕುಪಿತನಾದ ಕರ್ಣಾರಿಯು ಪುನಃ ಅಮೋಘಾಸ್ತ್ರಗಳನ್ನು ತೊಡಲು ಶಿವನು ಮತ್ತೆ ಅವನ್ನೆಲ್ಲಾ ಮಾರ್ಗದಲ್ಲೇ ಖಂಡಿಸಿದನು. ಶಬರನ ಭುಜಬಲ, ಬಿಲ್ಲಾಳ್ತನಗಳನ್ನು ಕೊಂಡಾಡಿ ತನ್ನ ಸರಿಸಮನೆನಿಸಿ ಕಾದಿದನೆಂದು ಅರ್ಜುನನು ಕೊಂಡಾಡಿ ತತ್‌ಕ್ಷಣವೇ ನಿಶಿತಾಸ್ತ್ರಗಳನ್ನು ತೊಟ್ಟನು. ಶಿವನಿಂದ ದಿವ್ಯಾಸ್ತ್ರಗಳನ್ನು ಪಡೆಯಲು ಬಂದ ಅರ್ಜುನನು ತನ್ನಲ್ಲಿರುವ ಬಾಣಗಳನ್ನೆಲ್ಲಾ ಶಿವನಿಗೆ ತೋರುವಂತೆ ಆತನ ಮೇಲೆ ಪ್ರಯೋಗಿಸಲು ಶಿವನು ಅವನ್ನೆಲ್ಲಾ ನಡು ವೆಯೇ ಕಡಿದು ನಿನ್ನಿಷ್ಟವಾದ ಅಸ್ತ್ರವನ್ನು ನೋಡೆಂದು ಅರ್ಜುನನಿಗೆ ತೋರುವಂತೆ ತಾನು ಆತನಮೇಲೆ ಬಾಣ ಪ್ರಯೋಗಿಸಿದನು. ಅರ್ಜುನನು

ಪುಳಿಂದನ ಬಿಲ್ ಬಿನ್ನಣಕ್ಕೆ ಮೆಚ್ಚಿ ನರಸುರಾಸುರರಲ್ಲಿ ತನ್ನೆದುರಿಗೆ ನಿಲ್ಲುವ ಶೂರರಾರೂ ಇಲ್ಲದಿರಲು ಇಷ್ಟೊಂದು ಸಾಹಸದಿಂದ ಯುದ್ಧಮಾಡಿದ ಕಿರಾತನು ನಿಜವಾಗಿಯೂ ಸಾಹಸಿಯೆಂದು ಹೇಳಿದನು. ತಾನು ಬಿಟ್ಟಿಲ್ಲ ಬಾಣಗಳನ್ನೂ ಪುಳಿಂದನು ನುಂಗುತ್ತಿದ್ದರೂ ಅದನ್ನು ಕಂಡು ಇವನು ನಿಜವಾಗಿಯೂ ವ್ಯಾಧನಲ್ಲ, ಈತನಾರೋ ಬೇರೆಯವನಿರಬೇಕು ಎಂಬ ವಿಚಾರವು ಕ್ಷಾತ್ರದುಸ್ತ್ರಾಮಸಮಡಸಿದವನಾದ ಪಾರ್ಥನಿಗೆ ಆಗಲಿಲ್ಲ. ಅರ್ಜುನನ ಬಳಿಯಿದ್ದ ಅಸ್ತ್ರಗಳೆಲ್ಲಾ ಮುಗಿದುವು. ಶಂಕರನಂಘ್ರಿಸೇವೆಗೆ ಕಂಟಕವಾಗಿ ಬಂದ ಪುಳಿಂದನ ಸೊಕ್ಕನ್ನು ಮುರಿಯುವೆನೆಂದು ಗರ್ಜಿಸಿ ಚಾಪದಿಂದ ಚಂದ್ರಮೌಳಿಯ ವಕ್ಷಸ್ಥಳವನ್ನು ಅಪ್ಪಳಿಸಿದನು. ಕಪರ್ದಿಯು ನಗುತ್ತಾ ಆ ಧನುಸ್ಸನ್ನೂ ಸಹ ಸೆಳೆದುಕೊಂಡನು. ಇದರಿಂದ ಮತ್ತೆ ಮಿತಿ ಮೀರಿದ ಕೋಪಗೊಂಡ ಅರ್ಜುನನು ಕತ್ತಿಯಿಂದ ಹೊಡೆಯಹೋಗಲು ಶಿವನು ಅದನ್ನೂ ಸಹ ಸೆಳೆದುಕೊಂಡನು. ಅರ್ಜುನನ ಕೈ ಬರಿದಾಗಿ ದಂತ ಮುರಿದ ಮದ್ದಾನೆಯಂತಾದನು. ಇಷ್ಟಾದರೂ ಅರ್ಜುನನು ಹೆದರಿ ಹಿಮ್ಮೆಟ್ಟದೆ ಸಮೀಪದಲ್ಲಿದ್ದ ಪೆರ್ಮರಗಳನ್ನೂ, ಕಲ್ಗುಂಡುಗಳನ್ನೂ ಶಬರನ ಮೇಲೆ ಎಸೆಯಲು ಮೃತ್ಯುಂಜಯನು ಒಂದೇ ಒಂದು ಬಾಣದಿಂದ ಅವು ಗಳನ್ನೆಲ್ಲಾ ಕತ್ತರಿಸಿಬಿಟ್ಟನು. ನಂತರ ಶಿವನು 'ಎಲೆಗೊರವಾ, ನಿನ್ನ ಕೈ ಬರಿದಾಯ್ತು. ನಿನ್ನಲ್ಲಿ ಛಲ, ಬಲಗಳಿದ್ದರೆ ಇನ್ನೊಂದು ಆಯುಧವನ್ನು ತಾ, ಇಲ್ಲದಿದ್ದರೆ ನನ್ನನ್ನು ಕೇಳು, ಕೊಡುತ್ತೇನೆ' ಎನ್ನಲು ಧನಂಜಯನು, ನಕ್ಕು 'ಪುಳಿಂದ, ಇಷ್ಟೊಂದು ಉಬ್ಬಟೆಯೇಕೆ? ಶಸ್ತ್ರಾಸ್ತ್ರಗಳ ಯುದ್ಧ ಸಾಕು ಮುಷ್ಟಿಯುದ್ಧಕ್ಕನುವಾಗು. ಆಗ ನನ್ನ ಬಲವದ್ದೋರ್ದಂಡ ಶೌರ್ಯಪ್ರವರ್ತನವನ್ನು ತೋರಿಸುತ್ತೇನೆ' ಎಂದನು. ಇದನ್ನು ಕೇಳಿ ಗಣಸಂದೋಹವೆಲ್ಲಾ ಆಶ್ಚರ್ಯಪಡುತ್ತಿರಲು ಶಿವನು ಗಿರಿಜೆಯನ್ನು ಕುರಿ ತು 'ನಾಲ್ಕು ತಿಂಗಳು ಪರ್ಣಾಹಾರ, ಮತ್ತೆ ನಾಲ್ಕುತಿಂಗಳು ವಾತಾಹಾರ ಇವನ್ನು ಸೇವಿಸಿ ಶರೀರವು ಬಳಲಿದ್ದರೂ ನನ್ನೊಡನೆ ಸರಿಸಮನಾಗಿ ಕಾದಿದ ಇವನ ಸಾಹಸವನ್ನು ನೋಡು. ಕಾದುವ ಆಯುಧಗಳೆಲ್ಲಾ ಹೋದರೂ, ಶೌರ್ಯ ವೀರ್ಯಗಳನ್ನು ಬಿಡದೆ, ಯಾರ ಸಹಾಯವನ್ನೂ

ಅಪೇಕ್ಷಿಸದೆ ಯುದ್ಧ ಮಾಡಿದ ಇವನ ಸಾಹಸವನ್ನು ನೋಡು. ಕುಲಗಿರಿ ಚಲಿಸಿದರೂ, ಬಡಬಾಗ್ನಿಯು ತಂಪಾದರೂ, ಸೂರ್ಯಬಿಂಬವು ಕರಗಿದರೂ ಯುದ್ಧದಲ್ಲಿ ಪಾರ್ಥನು ಸೋತೋಡುವನೇ? ಈತ ಹರಿಯಂಶೋದ್ಭೂತ. ನನ್ನ ಪಾದಭಕ್ತ. ಶತ್ರುಸಂಹಾರಾರ್ಥವಾಗಿ ನನ್ನಿಂದ ದಿವ್ಯಾಸ್ತ್ರಗಳನ್ನು ಪಡೆಯಲು ಬಂದಿದ್ದಾನೆ. ಆದ್ದರಿಂದ ಈತನಿಗೆ ಆವನ ಅಪೇಕ್ಷಿತವಾದ ಅಸ್ತ್ರವನ್ನು ಕೊಡುತ್ತೇನೆ' ಎಂದು ಹೇಳಿ ತನ್ನ ಭಕ್ತವತ್ಸಲತೆಯನ್ನು ತೋರ್ಪಡಿಸಿದನು.

ಇಬ್ಬರ ಬಾಹುಯುದ್ಧವು ಆರಂಭವಾಯಿತು. ಅವರ ಬಾಹುಸ್ಫಾಲನೆ ಯಿಂದ ಸಮುದ್ರವು ತುಳುಕಿ, ಇಳೆ ನಡುಗಿ, ನಗಶಿಖರಗಳು ಕೆಡೆದು ಬಿದ್ದವು. ಎರಡು ಕುಲಗಿರಿಗಳು, ಎರಡು ಬಡಬಾಗ್ನಿಗಳು, ಎರಡು ಸಿಂಹ ಗಳು ಮನುಷ್ಯಾಕಾರಗಳನ್ನು ತಾಳಿ ಹೋರಾಡುವಂತೆ ವೃಷಧ್ವಜ ಮರ್ಕಟಧ್ವಜರು ಕಾದಾಡಿದರು. ಸಿಟ್ಟುಸಿರಿನಿಂದ ಹೊಗೆಯೂ, ಮುಷ್ಟಿ ಯಘಾತದಿಂದ ಕೆಂಡವೂ ಹೊರಸೂಸುತ್ತಿದ್ದುವು. ಪದಾಘಾತಕ್ಕೆ ಭೂವಿ ಯು ಕುಸಿಯುತ್ತಲೂ, ಕೂರ್ಮನು ಕುಗ್ಗುತ್ತಲೂ, ಸಮುದ್ರವು ಅಲ್ಲೋಲ ಕಲ್ಲೋಲವಾಗುತ್ತಲೂ, ವಿದ್ಯಾಧರರ ವಿಮಾನಗಳು ಜೀರ್ಣಪರ್ಣದಂತೆ ಹಾರಾಡುತ್ತಲೂ ಇದ್ದುವು. ಎಷ್ಟೇ ಹೋರಾಡಿದರೂ ಶಿವನಿಗೆ ಸ್ವಲ್ಪವೂ ಗಾಯವಾಗದಿರಲು ಕುಪಿತನಾದ ಶತಮುಖಸುತನು ಆತನುಹರನ ವಕ್ಷಸ್ಥಳ ವನ್ನು ತಿವಿದನು. ಆ ಕೈ ಮುಟ್ಟಿದವೊಡಲೇ ಕಪಟ ಕಿರಾತನು ಪಾಕರಿಪು ತನಯನಂಗವನ್ನು ತಿವಿದನು. ಇವರ ಕಾಳಗವನ್ನು ನೋಡುತ್ತಿದ್ದ ಸುರಗಣ ಶಿವಗಣಗಳು ವಿಸ್ಮಯದಿಂದ ಅರ್ಜುನನನ್ನು ಹೊಗಳಿದರು. ಮೇಲಿರ ಗಿನ ಅರ್ಜುನನನ್ನು ಶಿವನು ಒತ್ತಿ ಮೆಟ್ಟಿದನು. ಆಗ ಅರ್ಜುನನ ಮೂಗು ಬಾಯಿಗಳಿಂದ ರಕ್ತವು ಹೊರಚೆಲ್ಲಿತು. ಅದನ್ನು ಕಂಡ ಮುಕ್ಕ ಣ್ಣನು ಅತಿಯಾಗಿ ಮರುಗಿದನು. ಆಗ ಅರ್ಜುನನ ಧೈರ್ಯವು ಬತ್ತಿ, ಶಕ್ತಿ ಉಡುಗಿ, ಮನಸ್ಸು ಸಡಿಲಿ, ಎಚ್ಚರಳಿದು, ಸಂಭ್ರಮವು ಅಡಗಲು ಬಹುವಾಗಿ ಹಂಬಲಿಸಿದನು. ಅಪಜಯದಿಂದ ಅರ್ಜುನನಿಗೆ ಹೆಚ್ಚು ಚಿ

ಯುಂಟಾಗಿ 'ಪೂರ್ವಜನ್ಮದಲ್ಲಿ ನಾನು ಶಿವಭಕ್ತಿಯನ್ನು ಬಿಟ್ಟಿನೋ, ಶಿವ ನಿಂದೆಯನ್ನು -ಕೇಳಿದ್ದೆನೋ, ಶಿವಭಕ್ತರನ್ನು ಹೀಯಾಳಿಸಿದ್ದೆನೋ, ಶಿವ ಪೂಜೆಗೆಯ್ಯದೆ ಊಟಮಾಡಿದ್ದೆನೋ, ಶೈವವ್ರತವನ್ನು ಬಿಟ್ಟದ್ದೆನೋ, ಏನುಕಾರಣ ಇಂತಹ ಅಪಜಯವುಂಟಾಯಿತು. ಇನ್ನೆಲ್ಲಿ ವಿಜಯನೆಂಬ ಹೆಸರು. ಎಲ್ಲಿಯ ವನ, ಎಲ್ಲಿಯ ಹಂದಿ, ಎಲ್ಲಿಯ ಬೇಡ, ಎಲ್ಲಿಯ ಸೋಲು. ಶಿವಶಿವಾ, ಎಂತಹ ವಿಚಿತ್ರ. ಈತನೇ ನರನೋ, ನಾನೇ ಶಬರನೋ, ಇದೆಲ್ಲಾ ಜಯಲಕ್ಷ್ಮಿಯ ಆಟವೋ" ಎಂದು ಚಿಂತಿಸಿ ವಿರೂಪಾಕ್ಷನುಪೇಕ್ಷೆ ಯಿಂದ ಈ ಪರಾಜಯ ತನಗುಂಟಾಯಿತೆಂದು ಬಗೆದು ಶಿವನ ಸೇವೆಮಾಡಿ ಆತನ ಕರುಣೆಯನ್ನು ಪಡೆದು ನಂತರ ಈ ಬೇಡನನ್ನು ಸೋಲಿಸುವೆನೆಂದು ಪರಿಶುದ್ಧವಾದ ಮನಸ್ಸಿನಿಂದ ಮರಳಲಿಂಗವನ್ನು ಮಾಡಿ ಕಣಿಗಲೆ. ಗುಲಾಬಿ, ಕಕ್ಕೆ, ಮುತ್ತುಗ, ಪಾದರಿ, ಈ ಹೂವುಗಳಿಂದ ಅರ್ಚಿಸಿ "ನಿನ್ನ ಪದಭೃತ್ಯನಾದ ನನಗೆ ಉಂಟಾದ ಸೋಲಿನಿಂದ ಕೊರತೆ ನಿನಗಲ್ಲವೆ? ಆದ್ದ ರಿಂದ ನನ್ನನ್ನ ಕಾಪಾಡಿ ರಿಪುಜಯಮನಿತ್ತು ಪೊರೆ" ಎಂದು ಬೇಡಿ ಕೊಂಡನು.

೬

ಅರ್ಜುನನು ಮಣಲಲಿಂಗಾರ್ಚನೆಯನ್ನು ಮಾಡಿ ನಂತರ ಯುದ್ಧಕ್ಕೆ ಸಿದ್ಧನಾಗಿ ಕಿರಾತನನ್ನು ಸದೆದಿಕ್ಕುವೆನೆಂದು ಅರ್ಭಟಿಸುತ್ತಾರೋಷಾ ರುಣ ಕಣ್ಣುಗಳಿಂದ ಅವನನ್ನು ದೃಷ್ಟಿಸಲು ತಾನು ಮಳಲ ಲಿಂಗಕ್ಕೆ ಪೂಜಸಿದ್ದ ಪುಷ್ಪಮಂಜರಿಯು ಅಲ್ಲಿ ಬರಿದಾಗಿ ಕಿರಾತನ ಮಂಡೆಯ ಮೇಲಿರುವುದನ್ನು ಕಂಡು ಅತ್ಯಾಶ್ಚರ್ಯದಿಂದ ಮತ್ತೊಮ್ಮೆ ಪರೀಕ್ಷಿಸುವು ದಾಗಿ ನಿರ್ಧರಿಸಿ ಹೂಗೊಂಚಲನ್ನು ತಂದು ಭಕ್ತಿ ಪುರಸ್ಸರವಾಗಿ ಲಿಂಗದ ಶಿರದ ಮೇಲೆ ಪೂಜಿಸಿ, ನಮಸ್ಕರಿಸಿ, ನಂತರ ಅತ್ತನೋಡಲು ಅದೇ ಪುಷ್ಪಮಂಜರಿಯು ಶಬರೋತ್ತಮಾಂಗದಲ್ಲಿರುವುದನ್ನು ಕಂಡು ಆಶ್ಚರ್ಯ ಭಯಾಬ್ಧಿಯಲ್ಲಿ ಮುಳುಗಿದನು. 'ಭುವನೈಕವಲ್ಲಭನಾದ ಶಿವನೇ ಅನು

ಗ್ರಹಿಸಿ ಶಬರಾಕೃತಿಯಿಂದ ಬರಲು ತಪೋದ್ವೇಗದ ಭರದಿಂದ ಆತನನ್ನೇ ಎದುರಿಸಿದ ನನ್ನಂತಹ ಅಜ್ಞನು ಬೇರಾರಿದ್ದಾನೆ' ಎಂದು ಯೋಚಿಸಿದ ಕೂಡಲೇ ಅವನ ಎದೆ ಹವ್ವನೆ ಹಾರಿತು, ಮೈ ಜುಮ್ಮೆಂದು ಭೀತಿ ಬೇರೂರಿತು. ಆಗ ಪಾರ್ಥನು 'ಅಷ್ಟೊಂದು ಬಾಣಗಳಿಂದ ಹೊಡೆವಾಗ ಒಂದು ಬಾಣವೂ ತಾಗದಿರಲು ಆಗಲೇ ಈತನು ಶಂಭುವೆಂದು ತಿಳಿದೆನೇ ? ಕೈಲಿದ್ದ ಬಿಲ್ಲು, ಕತ್ತಿಗಳನ್ನೆಲ್ಲಾ ಸೆಳೆದುಕೊಂಡಾಗಲಾದರೂ ಈತನು ಶಿವನಿರಬೇಕೆಂದು ತಿಳಿಯಲಿಲ್ಲವಲ್ಲಾ! ಪುರಾಕೃತ ಕರ್ಮವೆಂತುಟೋ. ಸೃಷ್ಟಿಸ್ಥಿತಿಲಯ ಕಾರಕನೂ ಶಿಕ್ಷ ರಕ್ಷಾಕರ್ತನೂ ಆದ ಶಿವನೊಡನೆ ಯುದ್ಧ ಮಾಡಿದೆನೇ, ಜಗದಜೀವರನಾಡಿಪ ಸೂತ್ರಧಾರನೊಡನೆ, ಶ್ರುತಿಸ್ಮೃತಿಸ್ತವ ನಾತೀತನೂ, ಅದ್ವಯನೂ ಆದ ಶಿವನೂಡನೆ ಯುದ್ಧ ಸಲ್ಲುವದೆ. ಹರನೊಲ ವನ್ನು ಪಡೆಯಲುಬಂದು ಹರಚರಣ ದ್ರೋಹಕ್ಕೆ ಭಾಜನನಾದೆನಲ್ಲಾ. ಪೂ ಜಿಸಬೇಕಾದವನೊಡನೆ ಹೋರಾಡಿದೆನಲ್ಲಾ, ಸ್ತುತಿಸಬೇಕಾದವನನ್ನು ಮೂದಲೆ ಮಾತುಗಳಿಂದ ಹೀಯಾಳಿಸಿದೆನಲ್ಲಾ, ಕೈ ಮುಗಿಯಬೇಕಾದವ ನೊಡನೆ ಮುಷ್ಟಿಯುದ್ಧವಾಡಿದೆನಲ್ಲಾ " ಎಂದು ಚಿಂತಿಸುತ್ತಿರಲು ಇಂದು ಧರನು ಪಾರ್ಥನ ಬಳಿಗೆ ಬಂದು ಶಬರಾಂಗವನ್ನು ತೊರೆದು ನಿಜಾಕೃತಿ ವೆತ್ತು ಪ್ರೀತಿಯಿಂದ ಅವನಿಗೆ ತಣ್ಣುಬೀರಿದನು. ದೇವತೆಗಳು ಪುಷ್ಪ ವೃಷ್ಟಿ ಕರೆದು ಸುರಭೇರೀನಿನಾದವೆಸಗಿದರು. ಹರಸುರ ಗಣಗಳು ಕಿರಾತ ವೇಷವನ್ನು ಬಿಟ್ಟು ಮುನ್ನಿನಂತೆ ನಿಜರೂಪವನ್ನು ತಳೆದರು. ಗಿರಿಜೆಯೂ ಸಹ ಹಾರ ಕಿರೀಟ ಕುಂಡಲೋಜ್ವಳ ಕಾಂತಿಯಿಂದ ಕಣ್ಗೊಳಿಸಿದಳು. ರೋಗಿಯು ಸಂಜೀವವನ್ನೂ, ಬಡವನು ಐಶ್ವರ್ಯವನ್ನೂ, ಸಮುದ್ರದಲ್ಲಿ ಬಿದ್ದವನು ತೆಪ್ಪವನ್ನೂ, ಜಾತ್ಯಂಧನು ಕಣ್ಣನ್ನೂ, ಪಡೆದಂತೆ ಅಜುನನು ಶಿವನ ಪಾದಗಳನ್ನು ಕಂಡು ಪಾಪಿಯಾದ ತನ್ನ ಸರ್ವಾಪರಾಧಗಳನ್ನು ಮನ್ನಿಸುವುದೆಂದು ನಾನಾ ಪ್ರಕಾರವಾಗಿ ಪ್ರಾರ್ಥಿಸಿ ತಾನು ಮತ್ತು ತನ್ನ ವಂಶವು ಇಂದು ಪವಿತ್ರವಾಯಿತೆಂದು ಸಂತೋಷಿಸಿದನು. ಆಗ ಭವಾನೀ. ರಮಣನು ಆತನ ಭಕ್ತಿಭಾವಕ್ಕೆ ಮೆಚ್ಚಿ ಗುಹಗಜಾಸ್ಯರನ್ನು ಅಪ್ಪುವ .ತೋಳುಗಳಿಂದ ನರನನ್ನು ಪ್ರೀತಿಯಿಂದ ಅಪ್ಪಿ ತನ್ನ ಕೈಗ

ಳಿಂದ ವೈದಡವಿ 'ಧನಂಜಯಾ, ನಿನ್ನ ಕಟೂಕ್ತಿಯೇ ನನಗೆ ಮಂತ್ರ. ಶರಾಳಿಯೇ ಪುಷ್ಪಸಂಚಯ, ಕೆಂಗಣ್ಣ ನೋಟವೇ ದೀಪಿಕೆ, ಧನುಸ್ಸಿನ ಏಟೇ ಪುಷ್ಪಮಾಲೆ, ಮುಷ್ಟಿಯುದ್ಧವೇ ಪಾದಪೂಜೆ' ಎಂದು ಹೇಳಿ ಕೃಪಾದೃಷ್ಟಿಯಿಂದ ನೋಡಿ ಆತನಿಂದ ಸೆಳೆದುಕೊಂಡಿದ್ದ ಬಿಲ್ಲು, ಬಾಣ, ಕತ್ತಿಗಳನ್ನೆಲ್ಲಾ ಹಿಂದಕ್ಕೆ ಕೊಟ್ಟನು. ಆಗ ಅರ್ಜುನನು ಸಮಸ್ತರಿಪು ಸಂಹಾರಕವಾದ ಪಾಶುಪತಾಸ್ತ್ರವನ್ನು ಕರುಣಿಸೆಂದು ಪ್ರಾರ್ಥಿಸಲು ವಿಧಿಪ್ರಕಾರವಾಗಿ ಸ್ನಾನಾಚಮನಗಳಾದನಂತರ ಮಂತ್ರಪುರಸ್ಸರ ಬ್ರಹ್ಮ ಶಿರೋಸ್ತ್ರವಾದ ಪಾಶುಪತಾಸ್ತ್ರವನ್ನು ಕೊಟ್ಟು ಶೈವ ವೈಷ್ಣವ ಎರಡೂ ಅಂಶಗಳಿಂದ ಕೂಡಿದ ಅರ್ಜುನನಿಗೆ ಎಂದಿಗೂ ಕುಂದುಂಟಾಗುವುದಿಲ್ಲ ವೆಂದೂ, ಶತ್ರುನಾಶವಾಗಿ ಸೌಖ್ಯವುಂಟಾಗುವುದೆಂದೂ ಭವಾನೀಧವನು ಆಶೀರ್ವದಿಸಿದನು. ಆಗ ಪುರಂಧರನಂದನನು ಕರುಣಾಂಸಭರಿತೆಯಾದ ಗಿರಿಜೆಗೆ ಸಾಷ್ಟಾಂಗಪೂರ್ವಕವಾಗಿ ನಮಸ್ಕರಿಸಿ ಪ್ರಾರ್ಥಿಸಲು ಅಪರ್ಣೆಯು ಪೂರ್ಣ ಕೃಪಾದೃಷ್ಟಿಯಿಂದ ನೋಡಿ ವೈರಿನಿಕಾಯವನ್ನು ಕ್ಷಣದಲ್ಲೇ ನಾಶ ಪಡಿಸುವ, ತೊಡುವಲ್ಲಿ ಒಂದು, ಬಿಡುವಲ್ಲಿ ಸಾವಿರ, ವೈರಿನಾಶದಕ್ಷ ಲಕ್ಷ, ಮಾರ್ಗದಲ್ಲಿ ಕೋಟಿ, ಯುದ್ಧರಂಗದಲ್ಲಿ ಗಣನಾತೀತವಾಗುವ ಅಂಜ ನಾಸ್ತ್ರವನ್ನು ಕೊಟ್ಟು 'ಜಯಮಂಪಡೆ ನೀಂ ಕಂದ ಸಮರಾಂಗಣ ದೊಳ್' ಎಂದು ಹರಸಿದಳು. ಶಿವ ಪದಾಬ್ಜದ ಸೋಂಕಿನಿಂದ ಅರ್ಜುನನು ಅತ್ಯಂತ ಕಾಂತಿಪೂರ್ಣನಾಗಿ ಸೌಂದರ್ಯದಿಂದ ಮೆರೆದನು. ಶಿವಪಾರ್ವತಿ ಯರೂ, ದೇವಗಣಗಳೂ ಹರಸಿ ಬೀಳ್ಕೊಟ್ಟರಾಪಾರ್ಥನಂ.

## ೩ ಕಥೆಯ ಮೂಲ

'ಶಬರಶಂಕರವಿಳಾಸ' ದ ಕಥೆ ಸಂಸ್ಕೃತ ಸಾಹಿತ್ಯದಲ್ಲಿ ಮೊದಲು ನಮ್ಮ ಕಣ್ಣಿಗೆ ಬೀಳುವುದು ವ್ಯಾಸಮಹಾಭಾರತದಲ್ಲಿಯೇ ಎಂದು ಹೇಳ ಬಹುದು. ಇದರ ಆಧಾರದ ಮೇಲೆ, ಅಲ್ಪ ಸ್ವಲ್ಪ ವ್ಯತ್ಯಾಸಮಾಡಿ ರಚಿಸಿದ ಇದೇ ಕಥೆಯನ್ನು ಶಿವಪುರಾಣ, ಭಾರವಿಯ ಕಿರಾತಾರ್ಜು

ನೀಯು, ಪಂಪನ ವಿಕ್ರಮಾರ್ಜುನ ವಿಜಯ, ಕುಮಾರವ್ಯಾಸನ ಭಾರತ, ವಿರೂಪಾಕ್ಷಪಂಡಿತನ ಚನ್ನಬಸವಪುರಾಣ ಇವುಗಳಲ್ಲಿ ಕಾಣಬಹುದು. ಇವುಗಳೆಲ್ಲವೂ ಷಡಕ್ಷರಿಗೆ ಹಿಂದಿನವು. ಇವುಗಳಲ್ಲಿ ಬರುವ ಈ ಆಖ್ಯಾನಕ್ಕೂ ಷಡಕ್ಷರಿಯ ಶಬರಶಂಕರವಿಳಾಸದ ಕಥೆಗೂ ಇರುವ ಏಕತೆ ಮತ್ತು ವ್ಯತ್ಯಾಸ ಇವುಗಳನ್ನು ಪರಿಶೀಲಿಸುವ ಮೊದಲು ಆಯಾ ಕಾವ್ಯಭಾಗಗಳಲ್ಲಿ ಬರುವ ಈ ಕಥೆಯನ್ನು ಸ್ಥೂಲವಾಗಿ ಪರಿಚಯ ಮಾಡಿಕೊಳ್ಳಬೇಕು.

೧. ಮಹಾಭಾರತದಲ್ಲಿ:– ಕೌರವರ ಕಪಟದಿಂದ ವನವಾಸಕ್ಕೆ ಪಕ್ಕಾದ ಪಾಂಡವರು ದ್ವೈತವನದಲ್ಲಿದ್ದಾಗ ತಮಗೊದಗಿದ ದುರವಸ್ಥೆಯ ಪರಿಯನ್ನು ಕುರಿತು ಮಾತನಾಡುತ್ತಿರುತ್ತಾರೆ. ವನವಾಸದ ದಾರುಣತೆಯಿಂದ ನೊಂದ ದ್ರೌಪದಿ ಮತ್ತು ಭೀಮ, ಇವರು ನಿರ್ವಿಕಾರನಾಗಿ ಕುಳಿತ ಧರ್ಮರಾಯನನ್ನು ಕುರಿತು ಮತ್ತೆ ರಾಜ್ಯವನ್ನು ಪಡೆದುಕೊಳ್ಳುವ ಕ್ಷಾತ್ರವೃತ್ತಿಯನ್ನು ಏಕೆ ಕೈಕೊಳ್ಳಬಾರದೆಂದು ವಾದಿಸುತ್ತಾರೆ. ಧರ್ಮರಾಯನು ಭೀಮ ದ್ರೌಪದಿಯರ ವಾದದ ಉದ್ದೇಶವನ್ನು ಮೆಚ್ಚಿದರೂ ಎದುರಾಳಿಯು ಬಲಶಾಲಿಯಾಗಿರುವಾಗ ಕಾಡಿನಲ್ಲಿರುವ ತಾವು ವನವಾಸದ ಅವಧಿಯ ನಿಯಮವನ್ನು ಮುರಿದು ಕ್ಷಾತ್ರವೃತ್ತಿಯನ್ನವಲಂಬಿಸುವುದು ಮತ್ತೂ ವಿನಾಶಕಾರಿಯೆಂದಮೇಲೆ ಭೀಮನ ಆವೇಶ ತಗ್ಗುತ್ತದೆ.

ಆ ಸಮಯಕ್ಕೆ ಸರಿಯಾಗಿ ವ್ಯಾಸಮಹರ್ಷಿಗಳು ಅಲ್ಲಿಗೆ ಆಗಮಿಸಿ ಪಾಂಡವರ ಆತಿಥ್ಯವನ್ನು ಸ್ವೀಕರಿಸುತ್ತಾರೆ. ಪಾಂಡವರ ದಾರುಣತೆಯನ್ನೂ, ಅವರಿಗೆ ಒದಗಿದ ಭಯ, ಶಂಕೆಗಳನ್ನೂ ಬಲ್ಲ ಆ ಮುನಿಗಳು ಧರ್ಮರಾಯನಿಗೆ ಒಂದು ಮಂತ್ರವನ್ನು ಉಪದೇಶಿಸಿ ಅದನ್ನು ಧರ್ಮರಾಯನು ಅರ್ಜುನನಿಗೆ ಉಪದೇಶಮಾಡಿ ಅವನನ್ನು ಇಂದ್ರ, ಮಹೇಶ್ವರರಿಂದ ದಿವ್ಯಾಸ್ತ್ರಗಳನ್ನು ಪಡೆಯುವ ತಪಸ್ಸಿಗೆ ನಿಯೋಜಿಸಬೇಕೆಂದೂ ತಿಳಿಸಿದರು. ಅಲ್ಲದೆ ಪಾಂಡವರು ದ್ವೈತವನದಿಂದ ಹೊರಟು ಬೇರೆಯ -ಡೆಗೆ ವಲಸೆಹೋಗುವಂತೆ ಸೂಚಿಸಿ ವ್ಯಾಸರು ಹೊರಟುಹೋಗುತ್ತಾರೆ.

ಅಂತೆಯೇ ಪಾಂಡವರು ದ್ವೈತವನವನ್ನು ಬಿಟ್ಟು ಕಾಮ್ಯಕವನಕ್ಕೆ ಹೋಗಿ ನೆಲಸುತ್ತಾರೆ. ಅಲ್ಲಿ ಧರ್ಮರಾಯನು ಅರ್ಜುನನನ್ನು ಕರೆದು ಮುಂದೆ ರಾಜ್ಯಕ್ಕಾಗಿ ಯುದ್ಧವಾದರೆ ಕೌರವರ ಕಡೆ ಇರುವ ಭೀಷ್ಮ ದ್ರೋಣಾದಿಗಳನ್ನು ಗೆಲ್ಲಲು ದಿವ್ಯ ಶಕ್ತಿಯೊಂದು ಅಗತ್ಯವೆಂಬುದನ್ನು ಒತ್ತಿ ಹೇಳಿ, ಅರ್ಜುನನು ಇಂದ್ರಕೀಲಕ್ಕೆ ಹೋಗಿ ತಪಸ್ಸುಮಾಡಿ ದಿವ್ಯಾಸ್ತ್ರಗಳನ್ನು ಪಡೆಯಲು ವ್ಯಾಸರು ಉಪದೇಶಿಸಿದ ಮಂತ್ರವನ್ನು ಅವನಿಗೆ ಉಪದೇಶಿಸುತ್ತಾನೆ. ಅರ್ಜುನನು ಮಂತ್ರಸಾಮರ್ಥ್ಯದಿಂದ ಇಂದ್ರಕೀಲವನ್ನು ಸೇರಿ ತಪಸ್ಸಿನಲ್ಲಿ ತೊಡಗುತ್ತಾನೆ. ಅಲ್ಲಿ ವೃದ್ಧವಿಪ್ರವೇಷದಲ್ಲಿ ಇಂದ್ರನು ಬಂದು ಅರ್ಜುನನ ತಪಸ್ಸನ್ನು ಅಲ್ಲಗಳೆಯುತ್ತಾನೆ. ಯಾವುದಕ್ಕೂ ಜಗ್ಗದೆ ನಿಶ್ಚಳ ತಪೋಮಯನಾಗಿದ್ದ ಅರ್ಜುನನ ಸ್ಥೈರ್ಯವನ್ನು ಕಂಡು ಇಂದ್ರನು ಹರ್ಷಿಸಿ, ಮೈದೋರಿ, ಅರ್ಜುನನು ಶಿವನನ್ನು ಕುರಿತು ತಪಸ್ಸುಮಾಡುವಂತೆ ತಿಳಿಸಿ ಅಂತರ್ಧಾನನಾಗುತ್ತಾನೆ.

ಅರ್ಜುನನು ತಪದ ಬಿರುಬೇಗೆಯಿಂದ ಭೀತರಾದ ಮುನಿಗಳು ಕೈಲಾಸಕ್ಕೆ ಹೋಗಿ ಶಿವನಿಗೆ ಮೊರೆಯಿಡುತ್ತಾರೆ. ಅರ್ಜುನನ ಮನೋರಥವನ್ನರಿತ ಮಹಾದೇವನು ಋಷಿಗಳಿಗೆ ಅಭಯವಿತ್ತು ಕಳುಹುತ್ತಾನೆ. ಅನಂತರ ಶಿವನು ತನ್ನ ಸತಿ ಮತ್ತು ಭೂತಗಣಗಳೊಂದಿಗೆ ಕಿರಾತವೇಷದಲ್ಲಿ ಇಂದ್ರಕೀಲ ನಗರದ ತಪ್ಪಲಿಗೆ ಬರುತ್ತಾನೆ. ಆ ಹೊತ್ತಿಗೆ ಸರಿಯಾಗಿ ಮೂಕದಾನವನೆಂಬ ರಾಕ್ಷಸನು ಭಯಂಕರ ವರಾಹ ರೂಪದಲ್ಲಿ ಅರ್ಜುನನಿದ್ದೆಡೆಗೆ ಧಾವಿಸುತ್ತಾನೆ. ಅರ್ಜುನ ಮತ್ತು ಕಿರಾತವೇಷಿಯಾದ ಶಿವ, ಇಬ್ಬರೂ ಏಕಕಾಲದಲ್ಲಿ ಆ ವರಾಹನನ್ನು ಬಾಣದಿಂದ ಹೊಡೆಯುತ್ತಾರೆ. ಹಂದಿಯು ಸತ್ತುಬೀಳುತ್ತದೆ. ಆ ಹಂದಿಯನ್ನು ಯಾರು ಮೊದಲು ಹೊಡೆದರೆಂದೂ, ಯಾರ ಬಾಣದಿಂದ ಅದು ಸತ್ತಿತೆಂದೂ ಅರ್ಜುನ, ಕಿರಾತರಲ್ಲಿ ವಿವಾದ ಮೊದಲಾಗಿ ಕ್ರಮೇಣ ಒಂದು ಭಯಂಕರ ಕದನವೇ ನಡೆದುಹೋಗುತ್ತದೆ. ತನ್ನ ಅಸ್ತ್ರಶಸ್ತ್ರಾದಿಗಳೆಲ್ಲವೂ ವಿಫಲವಾದುದನ್ನರಿತ ಅರ್ಜುನನು ಕಿರಾತನೊಂದಿಗೆ ಮಲ್ಲಯುದ್ಧದಲ್ಲಿ ತೊಡಗಿ, ಕಡೆಗೆ ಕಿರಾತನ ಮುಷ್ಟಿಘಾತದಿಂದ ಮೂರ್ಛೆಬೀಳುತ್ತಾನೆ. ಮೂರ್ಛೆ ತಿಳಿದೆದ್ದ

ಅರ್ಜುನನು ತಾನು ಪೂಜಿಸಿದ್ದ ಪುಷ್ಪಗಳನ್ನು ಆ ಶಬರನ ತಲೆಯ ಮೇಲೆ ಕಂಡು ಚಕಿತನಾಗುತ್ತಾನೆ. ಆಗ ಶಂಕರನು "ಅರ್ಜುನ! ಏಳು ನನ್ನನ್ನು ನೋಡು! ನಿನ್ನ ಧೈರ್ಯ ಶೌರ್ಯಗಳನ್ನು ನೋಡಿ ನನಗೆ ತುಂಬ ಸಂತೋಷವಾಗಿದೆ. ಕ್ಷತ್ರಿಯರಲ್ಲಿ ನಿನಗೆ ಸಮರಾದವರು ಯಾರೂ ಇಲ್ಲ. ತೇಜಸ್ಸಿನಲ್ಲಿಯೂ, ವೀರ್ಯದಲ್ಲಿಯೂ ನನಗೆ ಸಮನಾದವನು ನೀನು" ಎನುತ್ತಾನೆ. ಕೂಡಲೇ ಅರ್ಜುನನಿಗೆ ಕಿರಾತನೇ ಶಿವನೆಂಬ ಸತ್ಯ ತಿಳಿಯು ತ್ತದೆ. ಅರ್ಜುನನು ಶಿವನ ಪಾದದ ಮೇಲೆ ಹೊರಳಿ ಕ್ಷಮೆಯನ್ನು ಯಾಚಿಸುತ್ತಾನೆ. ಶಿವನು ಅರ್ಜುನನನ್ನು ತಬ್ಬಿಕೊಂಡು, ಅವನ ಪರಾ ಕ್ರಮವನ್ನು ಮೆಚ್ಚಿ ಪಾಶುಪತಾಸ್ತ್ರವನ್ನು ಕರುಣಿಸಿ ಅಂತರ್ಧಾನನಾಗು ತ್ತಾನೆ. ಆಗ ಸಕಲದಿಕ್ಪಾಲಕರೂ ಆಗಮಿಸಿ ತಮ್ಮಲ್ಲಿದ್ದ ದಿವ್ಯಾಸ್ತ್ರಗಳನ್ನು ನೀಡುತ್ತಾರೆ. ವಿಜಯಿಯಾದ ಅರ್ಜುನನನ್ನು ರಥವೇರಿಸಿಕೊಂಡು ಇಂದ್ರನು ಅಮರಾವತಿಗೆ ಕರೆದೊಯ್ಯುತ್ತಾನೆ.

೨. ಭಾರವಿಯ ಕಿರಾತಾರ್ಜುನೀಯದಲ್ಲಿ—

ಮೇಲೆ ಹೇಳಿರುವ ಮಹಾ ಭಾರತದ ಕಥೆಯ ಜಾಡನ್ನೇ ಭಾರವಿಯು ತನ್ನ ಕಿರಾತಾರ್ಜುನೀಯದಲ್ಲಿ ಅನುಸರಿಸಿಕೊಂಡು ಹೋಗಿದ್ದರೂ, ಅಲ್ಲಲ್ಲಿ ಅವನು ಹಲಕೆಲವು ವ್ಯತ್ಯಾಸಗಳನ್ನು ಮಾಡಿಕೊಂಡಿದ್ದಾನೆ. ಅವನು ಮಾಡಿಕೊಂಡಿರುವ ಹಲವು ವ್ಯತ್ಯಾಸಗಳನ್ನು ಗಮನಿಸಬಹುದು.

೧. ದ್ವೈತವನದಲ್ಲಿ ಧರ್ಮರಾಯ–ದ್ರೌಪದಿ–ಭೀಮ ಇವರಲ್ಲಿ ನಡೆ ಯುವ ಸಂವಾದಕ್ಕೆ ಮೂಲಕ್ಕಿಂತಲೂ ಹೆಚ್ಚಿನ ಜೀವಕಳೆ ತುಂಬಿ ವ್ಯಾಸರ ದೃಷ್ಟಿಯನ್ನು ಸ್ಫುಟಗೊಳಿಸಿದ್ದಾನೆ.

೨. ಮೂಲದಲ್ಲಿ ವ್ಯಾಸರು ಮಂತ್ರವನ್ನು ಮೊದಲು ಧರ್ಮರಾಯನಿಗೆ ಉಪದೇಶಿಸಿದರೆಂದೂ, ಧರ್ಮರಾಯನು ಅನಂತರ ಅರ್ಜುನನಿಗೆ ಉಪ ದೇಶಿಸಿದನೆಂದೂ ಇದೆ, ಆದರೆ ಭಾರವಿಯಲ್ಲಿ ವ್ಯಾಸರು ಅರ್ಜುನನಿಗೇ ನೇರವಾಗಿ ಉಪದೇಶಿಸಿದರೆಂದು ವರ್ಣಿತವಾಗಿದೆ.

೩. ಮಹಾಭಾರತದಲ್ಲಿ ಅರ್ಜುನನು ಮಂತ್ರದ ಬಲದಿಂದ ಇಂದ್ರ ಕೀಲಕ್ಕೆ ಹೋದನೆಂದಿದ್ದರೆ ಭಾರವಿಯಲ್ಲಿ ಯಕ್ಷನ ಸಹಾಯದಿಂದ ಇಂದ್ರ ಕೀಲಕ್ಕೆ ಹೋದನೆಂದು ನಿರೂಪಿತವಾಗಿದೆ.

೪. ಹಿಮಾಲಯ, ಗಂಧಮಾದನ, ಇಂದ್ರಕೀಲಗಳ ವರ್ಣನೆಯನ್ನು ಭಾರವಿಯು ವಿಸ್ತಾರವಾಗಿ ಮಹಾ ಕಾವ್ಯದ ಶೈಲಿಯಲ್ಲಿ ಮಾಡಿದ್ದಾನೆ.

೫. ಮೂಲಭಾರತದಲ್ಲಿ, ಅರ್ಜುನನ ತಪದಾರಂಭದಲ್ಲೇ ಇಂದ್ರನು ವಿಪ್ರವೇಷದಲ್ಲಿ ಅರ್ಜುನನ ಸ್ಥೈರ್ಯವನ್ನು ಪರೀಕ್ಷಿಸುತ್ತಾನೆ, ಆದರೆ ಭಾರವಿಯಲ್ಲಿ ಇಂದ್ರನಿಂದ ನಿಯೋಜಿತರಾದ ರಂಭಾಪ್ಸರೆಯರು ಬಂದು ಅರ್ಜುನನ ತಪೋಭಂಗಕ್ಕೆ ಯತ್ನಿಸಿ ವಿಫಲರಾಗುತ್ತಾರೆ.

೬. ಮಹಾಭಾರತದಲ್ಲಿ ಶಿವನು ಗಣಗಳೊಂದಿಗೆ ಬಂದರೂ ಯುದ್ಧ ನಡೆಯುವುದು ಕಿರಾತ ಮತ್ತು ಅರ್ಜುನ ಇಬ್ಬರಿಗೇ; ಉಳಿದವರೆಲ್ಲ ಪ್ರೇಕ್ಷಕರು. ಆದರೆ ಭಾರವಿಯಲ್ಲಿ ಅರ್ಜುನನಿಗೂ, ಕಿರಾತ - ಕಿರಾತಗಣ ಗಳಿಗೂ ಸಾಮೂಹಿಕ ಯುದ್ಧ ಜರುಗುತ್ತದೆ.

೭. ಕಟ್ಟಕಡೆಯ ಕಾಳಗವೂ ಭಾರವಿಯಲ್ಲಿ ವಿಶಿಷ್ಟತೆಯಿಂದ ಕೂಡಿದೆ. ಶಿವನ ಮುಷ್ಟಿಘಾತದಿಂದ ಮೂರ್ಛಿತನಾದ ಅರ್ಜುನನಿಗೆ ಎಚ್ಚರಾದಾಗ ತಾನು ಯಾವ ಹೂಗಳಿಂದ ಶಿವಲಿಂಗವನ್ನು ಪೂಜಿಸಿದ್ದನೋ ಅವುಗಳೇ ಕಿರಾತನ ಮುಡಿಯಲ್ಲಿರುವುದನ್ನು ಕಂಡು, ಕಿರಾತನೇ ಶಿವನೆಂಬುದು ಅರಿವಾಗುತ್ತದೆ. ಆದರೆ ಭಾರವಿಯಲ್ಲಿ ಕಿರಾತನ ಹತಿಯಿಂದ ತನ್ನ ಕಾಲ ಮೇಲೆ ಬಿದ್ದ ಅರ್ಜುನನಿಗೆ ಕೂಡಲೇ ಶಿವನು ಪ್ರೀತನಾಗಿ ಮೈದೋರು ತ್ತಾನೆ.

ಈ ಎಲ್ಲ ಬದಲಾವಣೆಗಳಲ್ಲೂ, ಭಾರವಿಯ ದೃಷ್ಟಿ ಮಹಾ ಕಾವ್ಯ ರಚನೆಯೇ.

ವಿಕ್ರಮಾರ್ಜುನ ವಿಜಯದಲ್ಲಿ – ಪಂಪ ಮಹಾಕವಿಯ ಕಾವ್ಯ 'ವಿಕ್ರ ಮಾರ್ಜುನ ವಿಜಯ'. ಎಲ್ಲೆಲ್ಲಿಯೂ ಅರ್ಜುನನ. ವಿಜಯವೇ ಕವಿಗೆ

ಪ್ರಧಾನ. ಉಳಿದ ಕವಿಗಳ ದೃಷ್ಟಿಗೆ 'ಕಿರಾತಾರ್ಜುನೀಯ' ಶಿವಲೀಲೆಯಾಗಿ ತೋರಿದ್ದರೆ, ಪಂಪಕವಿಗೆ ಆ ಧಾರ್ಮಿಕ ದೃಷ್ಟಿಗಿಂತ ಅರ್ಜುನನ ಪಾತ್ರವನ್ನು ಉಜ್ವಲಗೊಳಿಸುವ ದೃಷ್ಟಿಯೇ ಮುಖ್ಯ. ಮೂಲ ಭಾರತದ ಕಥೆಯ ಜಾಡನ್ನು ಕೆಲವೆಡೆ, ಭಾರವಿಯ ಕಾವ್ಯದ ಜಾಡನ್ನು ಕೆಲವೆಡೆ, ಪಂಪನು ತುಳಿದಿದ್ದರೂ ಕಡೆಯ ಸನ್ನಿವೇಶ ಅವೆರಡರಿಂದ ಭಿನ್ನವಾಗಿ ಸ್ವತಂತ್ರವಾಗಿದೆ.

ಇಲ್ಲಿ ದ್ವೈತವನಕ್ಕೆ ವ್ಯಾಸರು ಆಗಮಿಸುವುದು ಅರ್ಜುನನಿಗೆ ಪಾಶುಪತಾಸ್ತ್ರವನ್ನು ಗಳಿಸುವ ಮಂತ್ರೋಪದೇಶ ಮಾಡುವುದಕ್ಕಾಗಿಯೇ. ಅರ್ಜುನನು ಗುಹ್ಯಕನ ಹೆಗಲನ್ನೇರಿ ವಿದ್ಯಾಧರನಂತೆ ಕೈಲಾಸದ ತಪ್ಪಲಿಗೆ ಬರುತ್ತಾನೆ. ಅರ್ಜುನನು ಇಂದ್ರ ಸಿಂಹಾಸನಕ್ಕಾಗಿ ತಪಸ್ಸು ಮಾಡುವನೆಂದು ಹೆದರಿದ ಇಂದ್ರನು ರಂಭಾಪ್ಸರೆಯರನ್ನು ತಪೋಭಂಗ ಮಾಡಲು ಕಳುಹಿಸುತ್ತಾನೆ. ಅವರು ತಮ್ಮ ಹಾವ ಭಾವವಿಲಾಸಗಳಿಂದ ಅರ್ಜುನನ ಮನಸ್ಸನ್ನು ಕದಲಿಸಲು ಅಸಮರ್ಥರಾಗಿ ಇಂದ್ರನ ಬಳಿಗೆ ಹಿಂದಿರುಗುತ್ತಾರೆ. ಆಗ ಇಂದ್ರನೇ ವಿಪ್ರವೇಷದಲ್ಲಿ ಬಂದು ಅರ್ಜುನನ ತಪೋನಿಶ್ಚಲತೆಯನ್ನೂ, ಅವನ ತಪೋದ್ದೇಶವನ್ನೂ ತಿಳಿದು ಹರ್ಷಿತನಾಗಿ, ಆಶೀರ್ವದಿಸಿ ಅಂತರ್ಧಾನನಾಗುತ್ತಾನೆ. ಅರ್ಜುನನ ತಪಸ್ಸಿನ ಬೇಗೆಯಿಂದ ತಪ್ತರಾದ ಋಷಿಗಳ ಪ್ರಾರ್ಥನೆಯ ಮೇಲೆ ಪರಶಿವನು ಅರ್ಜುನನಿಂದಲೇ ವರಾಹ ರೂಪದಲ್ಲಿದ್ದ ಮೂಕದಾನವನನ್ನು ಕೊಲ್ಲಿಸಿ, ಅವನ ಬಿಲ್ಲಾಳ್ತನವನ್ನು ಪರೀಕ್ಷಿಸಲು ಕಿರಾತವೇಷವನ್ನು ತಾಳಿ ಗಿರಿಜೆ ಮತ್ತು ಗಣಾಳಿಯೊಡನೆ ಅಲ್ಲಿಗೆ ಬರುತ್ತಾನೆ. ಆಗ ಆ ಕಲಕಲದಿಂದ ಕೆರಳಿದ ಮೂಕದಾನವನು, ಅರ್ಜುನ ಮತ್ತು ಶಿವನಿಂದ ಏಕಕಾಲದಲ್ಲಿ ಬಿಡಲ್ಪಟ್ಟ ಬಾಣಗಳಿಂದ ಮೃತಿಹೊಂದುತ್ತಾನೆ. ಆ ಹಂದಿಯನ್ನು ಕೊಂದವರು ಯಾರೆಂಬ ಬಗ್ಗೆ ಶಿವನಿಗೂ, ಅರ್ಜುನನಿಗೂ ವಿವಾದ ಬೆಳೆದು ಸಾಮೂಹಿಕ ಯುದ್ಧವಾಗಿ ಅರ್ಜುನನ ಪರಾಕ್ರಮದಿಂದ ಕಿರಾತಸೇನೆ ನುಚ್ಚು ನೂರಾಗುತ್ತದೆ. ಅನಂತರ ಕಿರಾತಾರ್ಜುನರ ಮಲ್ಲಗಾಳಗದಲ್ಲಿ ಅರಿಗನು (ಅರ್ಜುನನು) ಹರನನ್ನು ನೆಲಕ್ಕೆ ಕೆಡವಿ ಗಂಟಲನ್ನು ಮೆಟ್ಟುತ್ತಾನೆ.

ಆಗ ಶಿವನು ತನ್ನ ಸ್ವಸ್ವರೂಪವನ್ನು ತೋರಲು ಅರ್ಜುನನು ಬೆದರಿ ತಾನು ಮಾಡಿದ ಅಪರಾಧಕ್ಕಾಗಿ ಕ್ಷಮೆಯನ್ನು ಯಾಚಿಸಿದಾಗ ಶಿವನು ಅವನ ಪರಾಕ್ರಮಕ್ಕೆ ಮೆಚ್ಚಿ ಪಾಶುಪತಾಸ್ತ್ರವನ್ನು ದಯೆಗೆಯ್ಯುತ್ತಾನೆ.

ಪಂಪನ ರಚನೆಯಲ್ಲಿ ಭಾರವಿಯ ಪ್ರಭಾವ ವಿಶೇಷವಾಗಿ ತೋರಿದರೂ ಕಡೆಯ ಯುದ್ಧ ಮಾತ್ರ ಪಂಪನ ಮನೋಧರ್ಮಕ್ಕೂ, ಕಾವ್ಯೋದ್ದೇಶಕ್ಕೂ ಸಾಕ್ಷಿಯಾಗಿ ವಿಶಿಷ್ಟವಾಗಿದೆ.

ಕುಮಾರವ್ಯಾಸಭಾರತದಲ್ಲಿ:–

ಕುಮಾರವ್ಯಾಸನು 'ಕಿರಾತಾರ್ಜುನೀಯ' ಪ್ರಸಂಗವನ್ನು ಕೊಂಚ ವಿಸ್ತಾರವಾಗಿಯೇ ಚಿತ್ರಿಸಿದ್ದಾನೆ. ಬಹುಮಟ್ಟಿಗೆ ಮೂಲಭಾರತವನ್ನೇ ಅನುಸರಿಸಿ ಅದರ ಕಥೆಯನ್ನು ಬಹು ಚೆನ್ನಾಗಿ ಕನ್ನಡಿಸಿದ್ದಾನೆ. ವ್ಯಾಸರು ಅರ್ಜುನನಿಗೆ ಮಾಡುವ ಹಿತೋಪದೇಶ, ಅರ್ಜುನನ ತಪಸ್ಸಿನ ವರ್ಣನೆ, ಯುದ್ಧದ ವರ್ಣನೆ, ಕಡೆಯಲ್ಲಿ ಅರ್ಜುನನು ಶಿವನನ್ನು ಕುರಿತು ಮಾಡುವ ಸ್ತೋತ್ರ, ಇವು ಮಹಾಕಾವ್ಯಕ್ಕನುಸಾರವಾಗಿ ವಿಸ್ತಾರವಾಗಿಯೇ ಬಂದಿವೆ. ಶಿವನ ಭಕ್ತಿಪ್ರಿಯತೆ, ಅರ್ಜುನನ ಪರಾಕ್ರಮ ಎರಡೂ ಉನ್ನತವಾಗಿ ಚಿತ್ರಿತವಾಗಿದೆ. ಮೂಲ ಭಾರತದಂತೆಯೇ ಇಲ್ಲಿಯೂ ವೇದವ್ಯಾಸರು ಧರ್ಮರಾಯನ ಮುಖೇಣ ಅರ್ಜುನನಿಗೆ ಮಂತ್ರೋಪದೇಶ ಮಾಡುತ್ತಾರೆ. ಅರ್ಜುನನು ತಪಸ್ಸನ್ನಾಚರಿಸುವಾಗ ಪರೀಕ್ಷಾರ್ಥವಾಗಿ ದೇವೇಂದ್ರನೇ ಬರುತ್ತಾನೆ, ತಪೋಭಂಗಕ್ಕಾಗಿ ರಂಭಾಪ್ಸರೆಯರಲ್ಲ–ಮುಷ್ಟಿ ಯುದ್ಧದಲ್ಲಿ ಶಿವನಿಂದ ಪೆಟ್ಟುತಿಂದ ಅರ್ಜುನನು ಶಿವಕರುಣೆಗಾಗಿ ಮಳಲ ಲಿಂಗಾರ್ಚನೆಮಾಡಿ ಪುನಃ ಯುದ್ಧಕ್ಕೆ ಬಂದಾಗ ತಾನು ಅರ್ಚಿಸಿದ ಪುಷ್ಪಮಾಲೆಯು ಕಿರಾತನ ಮಂಡೆಯ ಮೇಲಿರುವುದನ್ನು ಕಂಡು ಚಕಿತನಾಗಿ ಮತ್ತೆ ಪರೀಕ್ಷೆ ಮಾಡುವೆನೆಂದು ಎರಡನೆಯ ಬಾರಿ ಅರ್ಚಿಸಿ ಅನಂತರ ಕಿರಾತನೇ ಶಿವನೆಂಬ ಸತ್ಯವನ್ನು ಅರಿಯುತ್ತಾನೆ.

ಚನ್ನಬಸವಪುರಾಣದಲ್ಲಿ—ಶಿವನ ಪಂಚವಿಂಶತಿ ಲೀಲೆಗಳನ್ನು ಹೇಳಲು ತೊಡಗಿರುವ ವಿರೂಪಾಕ್ಷ ಪಂಡಿತನ ಈ ಗ್ರಂಥದಲ್ಲಿ ಕಿರಾತಾರ್ಜುನೀಯದ

ಕಥೆ, ಶಬರ ಶಂಕರ ಲೀಲೆಯಾಗಿ, ಶಿವನ ಮಹಿಮೆಯನ್ನು ಹೊಗಳುವ ಕಥೆಯಾಗಿ ಪರಿಣಮಿಸಿದೆ. ಕವಿ ಕಥೆಯನ್ನು ಬಹು ಸಂಕ್ಷೇಪವಾಗಿ ಹೇಳಿ ಮುಗಿಸಿದ್ದಾನೆ. ಈ ಕಥೆ ಇಲ್ಲಿ ಬಂದಿರುವಷ್ಟು ಸಂಕ್ಷಿಪ್ತವಾಗಿ ಮತ್ತೆಲ್ಲಿಯೂ ಬಂದಿಲ್ಲವೆನ್ನಬಹುದು. ಶಿವನ ಮಹಿಮೆಯನ್ನು ಸ್ತುತಿಸುವ ಪುರಾಣದೃಷ್ಟಿಯೊಂದು ಹೊರತು ಈತನ ಕಥೆಯಲ್ಲಿ ಯಾವ ವಿಶಿಷ್ಟತೆಯೂ ಇರುವಂತೆ ತೋರುವುದಿಲ್ಲ.

## ೪. ಪಾತ್ರಪರಿಚಯ

ಈ ಎಲ್ಲಾ ಕಥೆಗಳನ್ನೂ ಸ್ಥೂಲವಾಗಿ ಪರಿಶೀಲಿಸಿದ ಮೇಲೆ ಷಡಕ್ಷರಿಯು ಕುಮಾರವ್ಯಾಸನನ್ನೇ ಸಂಪೂರ್ಣವಾಗಿ ಅನುಸರಿಸಿದ್ದಾನೆಂಬುದು ಸ್ಪಷ್ಟವಾಗುತ್ತದೆ. ಕಥೆಯ ಜಾಡೂ ಅದೇ ರೀತಿಯಾಗಿ ಹರಿಯುತ್ತದೆ. ನಡುವೆಯೆಲ್ಲಿಯೂ ಯಾವ ಮಾರ್ಪಾಟನ್ನೂ ಮಾಡಿಲ್ಲ. ಆದರೆ ಕುಮಾರವ್ಯಾಸನ ಕಾವ್ಯೋದ್ದೇಶವೂ ಷಡಕ್ಷರಿಯ ಕಾವ್ಯೋದ್ದೇಶವೂ ಬೇರೆ ಬೇರೆಯಾಗಿರುವುದರಿಂದ ಕಾವ್ಯಾರಂಭ ಮತ್ತು ಪಾತ್ರಸೃಷ್ಟಿ ಇವುಗಳಲ್ಲಿ ಹಲಕೆಲವು ಮಾರ್ಪಾಟುಗಳನ್ನು ಕಾಣಬಹುದು. ಷಡಕ್ಷರಿಗೆ ಇದು 'ಶಬರಶಂಕರವಿಳಾಸವೇ ಹೊರತು' 'ಕಿರಾತಾರ್ಜುನೀಯ'ವಲ್ಲ. ಅಂದರೆ ಶಿವನೇ ಪ್ರಧಾನ ಪಾತ್ರ. ಅರ್ಜುನನ ಪಾತ್ರ ಅತಿ ಗೌಣ ಶಬರಶಂಕರವಿಳಾಸ ಘಟನಾ ಪ್ರಧಾನವಾದ ಕಾವ್ಯವೇ ಹೊರತು ಪಾತ್ರಪ್ರಧಾನವಾದುದಲ್ಲ. ಇಲ್ಲಿ ಬರುವ ಪಾತ್ರಗಳು ಕೇವಲ ಶಿವ ಮತ್ತು ಅರ್ಜುನ ಈರ್ವರೇ. ಈ ಇಬ್ಬರ ಪಾತ್ರಗಳನ್ನು ಸ್ಥೂಲವಾಗಿ ವಿವೇಚಿಸಬಹುದು.

**ಶಿವ** :—'ಶಬರಶಂಕರ ವಿಳಾಸ' ಎಂಬ ಕಾವ್ಯನಾಮವೇ ಸೂಚಿಸುವಂತೆ ಶಬರಶಂಕರನೇ ಈ ಕಾವ್ಯದ ನಾಯಕ. ಮಾನಿಸರಾಗಲೀ ಸುರರಾಗಲೀ, ಈತನ ಕಥಾನಾಯಕರಾಗಲಾರರು. ಹಾಗೆ ಮಾಡುವುದು ಕಸವರವನ್ನು ಕಳೆದು ಕಸವನಾಂತಂತೆ. ಶಿವನಂ ತದೀಯ ಶರಣ ವಜ್ರಮಂ ಬಲ್ಲಂತೆ ನುತಿಸುವುದೇ ಈತನ ಕಾವ್ಯೋದ್ದೇಶ, ಇದೇ ಶೈವಸಂಪ್ರದಾಯ—

ಕಥೆಯು ಆರಂಭವಾಗುವುದು ಶಿವನ ನಿವಾಸವಾದ ಕನಕಾಚಲ, ಆತನ ರಾಜಧಾನಿ, ಆತನ ಆಸ್ಥಾನವೈಭವ ಇವುಗಳ ವರ್ಣನೆಯಿಂದ ಇತರ ಕಾವ್ಯಗಳಲ್ಲಿ ಈ ಕಥೆಯ ಆರಂಭ ಪಾಂಡವರು ವಾಸಿಸುತ್ತಿದ್ದ ದ್ವೈತವನ ದಿಂದ

ಕಾವ್ಯದ ಉದ್ದಕ್ಕೂ ಶಿವಸ್ತೋತ್ರವೆ. ಷಡಕ್ಷರಿಯೂ ಹರಿಹರನಂತೆ ಭಕ್ತಕವಿ. ಕುಮಾರವ್ಯಾಸನಲ್ಲಿ ಕೃಷ್ಣನು ಬಂದನೆಂದರೆ ಕವಿಯು ಹೇಗೆ ವೈಮರೆತು ಔಚಿತ್ಯವನ್ನೂ ಮೀರಿ ತನ್ನ ಭಕ್ತಿಪುಷ್ಪ ಮಾಲೆಯನ್ನು ಅರ್ಪಿ ಸುತ್ತಿದ್ದಂತೆ ಷಡಕ್ಷರಿಯೂ ಸಹ ಶಿವಬಂದರೆ ವೈಮರೆಯುತ್ತಾನೆ. ಈ ಕಾವ್ಯದಲ್ಲಿ ಒಟ್ಟು ೪೬೭ ಪದ್ಯಗಳಿದ್ದರೆ ಅವುಗಳಲ್ಲಿ ಶಿವಸ್ತವನ ರೂಪವಾದ ಪದ್ಯಗಳು ೫೦ ಕ್ಕೂ ಮಿಗಿಲಾಗಿವೆ. ಶಿವನ ಪಂಚವಿಂಶತಿ ಲೀಲೆಗಳಿಗೂ ಸಂಬಂಧಪಟ್ಟ ಶಿವಸ್ತವಗಳನ್ನು ನಾವು ಈ ಕಾವ್ಯದಲ್ಲಿ ಕಾಣಬಹುದು.

ವಿಚಿತ್ರ ತಪಸ್ವಿಯಿಂದುಂಟಾದ ಪೀಡೆಯನ್ನು ಶಿವನಲ್ಲಿ ನಿವೇದಿಸ ಬಂದ ತಾಪಸರು ತಾವು ಬಂದ ಕಾರ್ಯವನ್ನೇ ಮರೆತರೋ ಎಂಬಂತೆ ಶಿವಸ್ತವ ದಲ್ಲೇ ಲೀನರಾಗುತ್ತಾರೆ. ಆ ತಾಪಸರ ಬರವಿನ ಕಾರಣವನ್ನು ತಿಳಿದ ಶಂಕರನು ಆ ತಪಸ್ವಿಗಳ ಮತ್ತು ಅರ್ಜುನನ ಮನೋರಥವಿತ್ತು ರಕ್ಷಿಸುವೆ ನೆಂದು ಅಭಯ ಪ್ರದಾನ ಮಾಡಿ ತನ್ನ ಭಕ್ತವತ್ಸಲತೆಯನ್ನು ತೋರಿದ್ದಾನೆ. ಭಕ್ತಪ್ರಿಯನಾದ ಶಂಕರನು ತನ್ನ ಭಕ್ತರಿಗಾಗಿ ಏನು ಮಾಡಲೂ ಸಿದ್ಧ. ಅರ್ಜುನನ ಶೌರ್ಯ ಪರಾಕ್ರಮಗಳನ್ನು ಲೋಕಕ್ಕೆ ವಿದಿತಪಡಿಸಲು ಗಿರಿ ಜೆಯೂ ಗಣಾಳಿಗಳೂ, ತಾನೂ ಭಿಲ್ಲಿಭಿಲ್ಲರ ವೇಷ ತಳೆದು ಬಂದರು. ಶಿಷ್ಟರಕ್ಷಣವು ಹೇಗೋ ಹಾಗೆಯೇ ದುಷ್ಟ ಶಿಕ್ಷಣವೂ ಆತನ ಕಾರ್ಯ. ಮೂಕದಾನವನ ಸಂಹಾರವೂ ಆತನಿಂದಾಗಬೇಕಿತ್ತು.

ಹಂದಿಯನ್ನು ಯಾರು ಕೊಂದರೆಂಬ ಬಗ್ಗೆ ಅರ್ಜುನ ಶಿವರಲ್ಲಿ ವಾದ ವುಂಟಾದಾಗ ಅರ್ಜುನನು ಶಿವನನ್ನು ನಾನಾ ಪ್ರಕಾರವಾಗಿ ಹೀಯಾಳಿಸಿ ಬೈದರೂ ಮಾರರಿಪುವು ಅತನ ಧೈರ್ಯ ಶೌರ್ಯಗಳನ್ನು ನಸುನಗುತ್ತಾ ಅಗಜಾತೆಗೆ ಸೂಚಿಸುತ್ತಿದ್ದನೇ ವಿನಹ ಯಾವಾಗಲೂ ಕೋಪಿಸಲಿಲ್ಲ.

ಅರ್ಜುನನು ಕೋಪದಿಂದ ಬಾಣವರ್ಷವನ್ನು ಶಿವನ ಮೇಲೆ ಕರೆದಾಗ ಕುಪಿತರಾದ ಗುಹ, ಗಜಾಸ್ಯ, ಗಣಾಳಿಗಳು ಗಜರಿ ಗರ್ಜಿಸಲು ಅರ್ಜುನನು ತನ್ನ ಭಕ್ತನೆಂದೂ ವಿನೋದಾರ್ಥವಾಗಿ ಆತನೊಡನೆ ತಾನೇ ಯುದ್ಧ ಮಾಡುವುದಾಗಿ ಅವರನ್ನೆಲ್ಲಾ ಸುಮ್ಮನಾಗಿಸುತ್ತಾನೆ.

ನರನೆಚ್ಚ ಬಾಣಾವಳಿಗಳನ್ನೆಲ್ಲಾ ನಡುವೆಯೇ ಕಡಿಯುತ್ತಲೂ, ಅವುಗಳನ್ನೆಲ್ಲಾ ನುಂಗುತ್ತಲೂ ಅರ್ಜುನನನ್ನು ಬರಿಗೈ ಮಾಡಿದನು. ಅರ್ಜುನನು ಮುಷ್ಟಿಯುದ್ಧಕ್ಕೆ ಅನುವಾಗಲು ಆತನ ವ್ರತನಿಷ್ಠೆ, ಶಕ್ತಿ ಪರಾಕ್ರಮಗಳನ್ನು ಗಿರಿಜೆಗೆ ಸೂಚಿಸುತ್ತಾನೆ. 'ಕಡಂಗಿಕಾದಿದನಿವಂ ಸಮಪಂಡಿಯೊಳೆನ್ನೊಳರ್ಜುನಂ '–ಎಂದು ಮನಬಿಚ್ಚಿ ಮೆಚ್ಚುಗೆಯನ್ನು ಸೂಚಿಸುತ್ತಾನೆ. ಕುಲಗಿರಿ ಚಲಿಸಿದರೂ ರವಿಬಿಂಬವು ಕಾಂತಿಗುಂದಿದರೂ ಅರ್ಜುನನು ಯುದ್ಧದಲ್ಲಿ ಬೆನ್ನೊಡ್ಡುವುದಿಲ್ಲವೆಂದು ಹೇಳಿ ಹರಿಯಂಶೋದ್ಭೂತನೂ ತನ್ನ ಪಾದ ಸೇವಕನೂ ಆದ ಆತನಿಗೆ ಅವನ ಅಪೇಕ್ಷಿತವಾದ ಅಸ್ತ್ರವನ್ನು ಕೊಡುವುದಾಗಿ ಗಿರಿಜೆಗೆ ತಿಳಿಸುವನು. ತನ್ನ ಮೇಲೆ ಯುದ್ಧಮಾಡಿದ ನರನ ದೋಷವನ್ನು ನೆನೆಯದೆ ಅವನನ್ನು ಕೀರ್ತಿಸಿ ಶಂಭುವು ತನ್ನ ಭಕ್ತವತ್ಸಲತೆಯನ್ನು ತೋರಿದ್ದಾನೆ. ಮುಷ್ಟಿಯುದ್ಧದ ಸಮಯದಲ್ಲಿ ತನ್ನ ಮೇಲೆರಗಿದ ಅರ್ಜುನನನ್ನು ಒತ್ತಿ ಮೆಟ್ಟಲು ಆತನ ಮೂಗು ಬಾಯಿಗಳಿಂದ ರಕ್ತವು ಹರಿದಾಗ 'ತಪ್ಪಾಯ್ತೆಸುತುಂ ಮನದೆ ಸಿಡಿಮಿಡಿಗೊಂಡಂ '—

ಶಿವನ ಕೃಪೆಗಾಗಿ ಅರ್ಜುನನು ಮಣಲ ಲಿಂಗವನ್ನು ಅರ್ಚಿಸಿ, ರಿಪುಜಯಮನಿತ್ತು ಪೊರೆ ಪುರಮಥನಾ ಎಂದು ಬೇಡಿಕೊಳ್ಳಲು ಇಷ್ಟಾರ್ಥವನ್ನು ನೀಡಲು ಆತನು ಅರ್ಚಿಸಿದ ಪುಷ್ಪವನ್ನು ಶಿರದಲ್ಲಿ ಧರಿಸಿ, ಆತನಿಗೆ ದರ್ಶನವಿತ್ತು ಗುಹಗಜಾಸ್ಯರನಪ್ಪುನತೋಳುಗಳಿಂದ ಅಪ್ಪಿ ಮೆಯ್ದಡವಿ ಅಕಾರ್ಯಕ್ಕಾಗಿ ವ್ಯಥೆಪಡುತ್ತಿದ್ದ ಅರ್ಜುನನನ್ನು ಕುರಿತು "ನಿನ್ನ ಕಟೂಕ್ತಿಯೇ ಮಂತ್ರ ಎಚ್ಚ ಶಿರಾವಳಿಯೇ ಪುಷ್ಪಸಂಚಯ, ಸರೋಷವೀಕ್ಷಣವೇ ದೀಧಿತಿ ದೀಪಿಕೆ, ಧನುರ್ಲತಾಹತಿಯೇ ಪುಷ್ಪಮಾಲೆ, ಮುಷ್ಟಿಯುದ್ಧವೇ ಪಾದಪೂಜೆ' ಎಂದು ಹೇಳಿ, ಸಮಾಧಾನಪಡಿಸಿ, ಪಾಶು

ಪಶಾಸ್ತ್ರವನ್ನಿತ್ತು 'ನಿನಗೆ ಕುಂದೆಂದುಂ ತೋಱದು. ಅರಿಯುಂಗೆಲ್ವಪೆ. ಸೌಖ್ಯಮಕ್ಕುಂ' ಎಂದು ಆಶೀರ್ವದಿಸಿ ಬೀಳ್ಕೊಟ್ಟನು.

ಅರ್ಜುನ:—ಅರ್ಜುನನ ಪಾತ್ರ ಅತಿ ಗೌಣ. ಈ ಕಾವ್ಯದಲ್ಲಿ ನಾವು ಮೊದಲು ಅರ್ಜುನನ ಹೆಸರನ್ನು ಕೇಳುವುದು ಇಂದ್ರಕೀಲದ ತಾಪಸ ವೃಂದದಿಂದ. ಅವರಿಗೆ ಶಿವನಲ್ಲಿ ಅರ್ಜುನನ ಮೇಲೆ ದೂರು ಹೇಳುವ ಉದ್ದೇಶವಿದ್ದರೂ ಪರೋಕ್ಷವಾಗಿ ಆತನನ್ನು ಹೊಗಳುತ್ತಾರೆ.

ವ್ಯಾಸರು ಪಾಂಡವರಲ್ಲಿ ಅರ್ಜುನನನ್ನೇ ತಪಸ್ಸಿಗೆ ಆಯ್ದಿರುವುದನ್ನು ನೋಡಿದರೆ ಅರ್ಜುನನಲ್ಲಿ ಯಾವುದೋ ಒಂದು ವಿಶೇಷತೆಯನ್ನು ಕಂಡಿರಬೇಕು. ಅರ್ಜುನನಿಗೆ ದೈವಕೃಪೆಯಿದೆಯೆಂಬುದನ್ನು ಸೂಚಿಸುವಂತೆ ಅರ್ಜುನನು ಪರಮ ಕೈವಲ್ಯತರುವೆಂಬಂತೆಸೆದು, ನಳನಳಿಕೆವೆತ್ತ ಬಿಲ್ವ ವೃಕ್ಷದ ಕೆಳಗೆ ನಿಂತಾಗ 'ತಪಸ್ಸಮುಚಿತಸ್ಥಳಮಪ್ಪುದು. ಇಲ್ಲಿಯೇ ನಿಲ್ಲು' ಎಂಬ ಗಗನ ಗಂಭೀರವಾಣಿಯನ್ನು ಕೇಳುತ್ತಾನೆ.

ಅರ್ಜುನನು ಶರಚಾಪಾನ್ವಿತನಾಗಿಯೇ ತಪಸ್ಸಿಗೆ ಕೂಡುತ್ತಾನೆ. ತಾನು ಆಚರಿಸುತ್ತಿರುವ ತಪದ ಉದ್ದೇಶ ಆಮುಷ್ಮಿಕವೇನೂ ಅಲ್ಲ. ಇಹಕ್ಕೆ ಸಂಬಂಧಪಟ್ಟ, ಕ್ಷತ್ರಿಯರಿಗೆ, ಅದರಲ್ಲೂ ಯುದ್ಧಕ್ಕೆ ಸಂಬಂಧಪಟ್ಟ, ವರವನ್ನು ಕೇಳುವ ಉದ್ದೇಶವಿದ್ದುದರಿಂದ ಹಾಗೆ ಬಿಲ್ಲು, ಬಾಣ, ಖಡ್ಗ ಇವುಗಳನ್ನು ಧರಿಸಿಯೇ ತಪಸ್ಸಿಗೆ ಕುಳಿತನು.

ಇಂದ್ರನ ಪರೀಕ್ಷೆಯಲ್ಲಿ ಅರ್ಜುನನು ಸಂಪೂರ್ಣವಾಗಿ ಉತ್ತೀರ್ಣನಾಗುತ್ತಾನೆ-

ಪೊಱಮೆಯ್ಯುವೇಷದಿರವೇ
ತೆಱನಾದೊಡಮೇನೋ ಮಾನಸಾಬ್ಜಾಂತರದೊಳ್
ಕಱಿಗೊರಲನಂಘ್ರಿದಳೆದ
ಟ್ಕೆಱೆಕೊಳ್ಗಾಂ ಜಾಸಿಸಿ ಮಹೇಶನಂ ಮಚ್ಚಿಸುವೆಂ

ಎಂದು ಅರ್ಜುನನು ಹೇಳುವ ಮಾತು ಸುವರ್ಣಾಕ್ಷರದಲ್ಲಿ ಬರೆದಿಡಬೇಕು.

ಶಿವನು ದುರ್ಲಭನಾದರೂ ಭಕ್ತಿಸಂಧಾನಕ್ಕೆ ಅಸಾಧ್ಯನಲ್ಲ ಎಂಬ ತತ್ವವನ್ನು ಅರ್ಜುನನು ಸಾರಿದ್ದಾನೆ. ಶಿವನನ್ನು ತನ್ನಿಂದ ಮೆಚ್ಚಿಸ ಲಾಗದಿದ್ದಲ್ಲಿ ಹರಣಮನೀವೆಂ ಎಂಬ ತನ್ನ ಅಂತ್ಯ ನಿರ್ಧಾರವನ್ನು ಸೂಚಿಸಿ ತನ್ನ ಮನೋಧೃಡತೆಯನ್ನು ತೋರಿದ್ದಾನೆ.

ತಪಸ್ಸಿನಲ್ಲಿ ದೇಹದಂಡನೆಯೂ ಒಂದು ಅಂಗ. ಅತಿ ಮುಖ್ಯವಲ್ಲ ದಿದ್ದರೂ ಅಮುಖ್ಯವಲ್ಲ. ಅದರಂತೆ ಕೆಲದಿನ ಹಣ್ಣನ್ನೂ, ಕೆಲದಿನ ಕಂದ ಮೂಲವನ್ನೂ, ಕೆಲದಿನ ಜೀರ್ಣಪರ್ಣವನ್ನೂ ಮತ್ತೆ ಕೆಲದಿನ ಗಾಳಿ ಯನ್ನೂ ಸೇವಿಸುತ್ತಾನೆ. ಆಗ ಅರ್ಜುನನು ಅಂತಃಜ್ಯೋತಿಯಿಂದ ಕೂಡಿ ಎರಕಹೊಯ್ದಂತೆ ನಿಶ್ಚಳತೆಯಿಂದಿದ್ದನು.

ಕೊನಗೆ ಅರ್ಜುನನು ಶಿವಂತಾನಾದನೋ, ತಾನೇ ಶಿವನಾದನೋ ಎಂಬ ರೀತಿಯಲ್ಲಿ ಸದೃಶಶಿವಧ್ಯಾನಾನುಸಂಧಾನದ ತಪಃಪ್ರಭಾವದಿಂದ ನಿಷ್ಕಂಪ ನಿರ್ವಿಕಾರತೆಯಿಂದ ಕೂಡಿದ್ದನು. ಆತನ ಘೋರ ತಪಃಪ್ರಭಾವ ದಿಂದ ಭೂಮಿ ಕಾಯ್ದು, ದೇವತೆಗಳು ನಡುಗಿ, ಪರ್ವತಗಳು ಕರಗಿ, ಚಂದ್ರ ಸೂರ್ಯರು ಕಾಂತಿಹೀನರಾಗಿ ತಪೋಗ್ನಿಜ್ವಾಲೆಯು ಇಂದ್ರಕೀಲ ವನ್ನೆಲ್ಲಾ ಹರಡುತ್ತದೆ.

ತಾಪಸರಿಂದ ದೂರು ಕೇಳಿದೊಡನೆಯೇ ಶಿವನು ಆ ತಪಸ್ವಿಯು ಜಗ ತ್ರಯಖ್ಯಾತನಾದ ಇಂದ್ರಸೂನುವೆಂದೂ ಆತನ ತಪೋದ್ದೇಶ ರಿಪುಜಯ ಕಾರಕವಾದ ಪಾಶುಪತಾಸ್ತ್ರವೆಂದೂ ಹೇಳಿ ಮನೋರಥವನ್ನು ಕೊಟ್ಟು ರಕ್ಷಿಸುವೆನೆಂದು ಅಭಯವಿತ್ತು ಬೀಳ್ಕೊಡುತ್ತಾನೆ.

ವರಾಹನನ್ನು ಯಾರು ಕೊಂದರೆಂಬ ಬಗ್ಗೆ ವಿವಾದ ಬಂದಾಗ 'ಎಲೆ ಶಬರ ನಿನ್ನ ಸಾಹಸ ನರಿ, ಮೊಲ, ಪುಲ್ಲೆಗಳಲ್ಲಿ ಮೆರೆಯುವಂತೆ ಚಲದಂಕ ಮಲ್ಲನಾದ ನನ್ನಲ್ಲೂ ಮೆರೆಯಬಲ್ಲದೇ' ಎಂದು ಹೇಳಿ ತನ್ನ ಛಲವೃತ್ತಿ ಯನ್ನು ಹೇಳಿಕೊಂಡಿದ್ದಾನೆ. ಅರ್ಜುನನ ವೇಷವನ್ನು ಕುರಿತು ಶಬರನು ಹಾಸ್ಯಮಾಡಲು ಅರ್ಜುನನು ಉದಾರ ಜಟಾಮೃಗಾಜಿನ ಸ್ಫಟಭಸಿ

ತಂಗಳಂ, ಶರ ಶರಾಸನ ಖಡ್ಗಮನಾಂತ ತಾಪಸೋತ್ಕಟನಾದ ಮೃಡನ ಶಿಷ್ಯನು ತಾನೆಂದು ಹೇಳುತ್ತಾನೆ.

ಶಿವಾರ್ಜುನರಿಗೆ ಘೋರವಾದ ಯುದ್ಧವಾಗುತ್ತದೆ. ತಾನು ಬಿಟ್ಟ ಎಲ್ಲಾ ಬಾಣಗಳನ್ನೂ ಶಬರನು ಕತ್ತರಿಸಲು ಅವನ ಮಹಾಶೌರ್ಯವನ್ನು ಕೊಂಡಾಡಿದನು. ' ನರಸುರ ದಾನವಾದಿಗಳಲ್ಲಿ ನನ್ನ ಶರಾಹತಿಗೊಡ್ಡಿ ನಿಲ್ವರಿಲ್ಲ. ನೀನಾದರೋ ಧೈರ್ಯವಾಗಿ ಎದುರಿಸುತ್ತಿದ್ದೀಯೇ. ಕಿರಾತ, ನಿಜವಾಗಿಯೂ ನೀನು ಉರುತರ ಸಾಹಸಿ' ಎಂದು ಮೆಚ್ಚಿದನು.

ಅರ್ಜುನನು ಬಿಟ್ಟ ಬಾಣಗಳನ್ನೆಲ್ಲಾ ಶಬರನು ನುಂಗುತ್ತಿರಲು ಅದನ್ನು ಕಂಡು ಈತನು ಶಬರನಲ್ಲ ಬೇರಾರೋ ಇರಬೇಕು ಎಂಬ ಸದ್ವಿವೇಕವು ಹುಟ್ಟದಿರಲು ಕಾರಣ ಆತನಲ್ಲಿದ್ದ 'ಕ್ಷಾತ್ರದುಸ್ತಾಮಸ' ಎಂದು ಕವಿಯು ಹೇಳಿದ್ದಾನೆ. ಆದರೆ ಈ ಮಾತು ಆತನ ಪಾತ್ರಕ್ಕೆ ಒಂದು ಕುಂದು. ಇದುವರೆವಿಗೂ ಕವಿಗೆ ಅರ್ಜುನನಲ್ಲಿದ್ದ ಬಂದು ಮೆಚ್ಚುಗೆ ಈ ಒಂದು ಮಾತಿನಿಂದ ಕುಂಠಿತವಾಗಿದೆ.

ಅರ್ಜುನನಿಗೆ ಪುಳಿಂದನ ಮೇಲೆ ಹೆಚ್ಚು ಕೋಪ. ತನ್ನನ್ನು ಗೆಲ್ಲುತ್ತಿದ್ದಾನೆಂಬ ಕಾರಣಕ್ಕಾಗಿಯಲ್ಲ, ಶಂಕರನಂಘ್ರಿಪಂಕಜದ ಸೇವೆಗೆ ಕಂಟಕನಾದನೇ ಎಂದು. ಅರ್ಜುನನಕ್ಕೆ ಬರಿದಾದಾಗಲೂ ಅವನು ಹೆದರದೆ ಮಲ್ಲಯುದ್ಧದಲ್ಲಿ ತೊಡಗುತ್ತಾನೆ. ಇದನ್ನು ಕಂಡ ಶಿವನು ಗಿರಿಜೆಯನ್ನು ಕುರಿತು ಯಾರ ಸಹಾಯವನ್ನೂ ನಿರೀಕ್ಷಿಸದೆ ಕೈಬರಿದಾದರೂ ಹೆದರದೆ ತನ್ನ ಸರಿಸಮನಾಗಿ ಕಾದಿದ ಅರ್ಜುನನು ನಿಜವಾಗಿಯೂ ಲೋಕೈಕವೀರ. ಕುಲಗಿರಿ ಚಲಿಸಿದರೂ. ಬಡಬಾಗ್ನಿಯು ತಂಪಾದರೂ, ರವಿಬಿಂಬವು ಕುಗ್ಗಿದರೂ ಅರ್ಜುನನು ಮಾತ್ರ ಯುದ್ಧದಲ್ಲಿ ಯಾರಿಗೂ ಬೆನ್ನೊಡುವುದಿಲ್ಲ ಎಂದು ಹೊಗಳಿದ್ದಾನೆ. ಅರ್ಜುನನು ಹರಿಯಂಶೋದ್ಭೂತ. ಶಿವಪಾದ ಭಕ್ತ. ಶಿವಾರ್ಜುನರ ಯುದ್ಧವನ್ನು ನೋಡುತ್ತಿದ್ದ ಸುರ, ಶಿವಗಣಗಳು ವಿಸ್ಮಯದಿಂದ ಅಗರಿಪುಸುತನನ್ನು ಮೆಚ್ಚಿ ಮೆಚ್ಚಿ ಹೊಗಳುತ್ತಿದ್ದರು.

ನಿಜವಾದ ಕಲಿಗೆ ಸಾವಿಗಿಂತ ಸೋಲು ಹರಿತ. ಕೆಳಗೆ ಬಿದ್ದ ಕೂಡಲೇ

ಅರ್ಜುನನಿಗೆ ಧೈರ್ಯವುಡುಗಿ, ಉತ್ಸಾಹ ನಾಶವಾಗಿ ಚಿಂತೆ ಅಧಿಕವಾಯಿತು. ತನ್ನ ಸೋಲಿಗೆ ಕಾರಣ ತಾನು ಹಿಂದಿನ ಜನ್ಮದಲ್ಲಿಲ್ಲೋ ಮಾಡಿದ ಶೈವಾಪರಾಧ, ವಿರೂಪಾಕ್ಷನುಪೇಕ್ಷೆ ಎಂದು ಬಗೆದು ಪ್ರಾಯಶ್ಚಿತ್ತಾರ್ಥವಾಗಿ ಮಣಲ ಲಿಂಗವನ್ನು ಅರ್ಚಿಸಿ ರಿಪುಜಯಮನಿತ್ತುಪೊರೆ ಪುರಮಥನಾ ಎಂದು ಬೇಡುವನು.

ಶಬರನೇ ಶಿವನೆಂಬ ಸತ್ಯವನ್ನು ಕಂಡ ಅರ್ಜುನನ ಸ್ಥಿತಿಯನ್ನು ಕವಿ ಬಹು ಚೆನ್ನಾಗಿ ವರ್ಣಿಸಿದ್ದಾನೆ.

ಪಡಿದೆಱಿದಂತೆ ಪಾಱಿತೆರ್ದಿ ಪವ್ವನೆ ಜುಮ್ಮೆನೆ ಮೆಯ್ಯುವಿರ್ ಪೊದ
ೞ್ದಿಡಿಕಿಱಿದತ್ತು ಘರ್ಮಜಲಮುಣ್ಮಿದುದಂಗದೊಳಾಗ್ರಹಗ್ರಹಂ
ಕಡೆದೊಲಗಿತ್ತು ಕೌತುಕರಸಂ ಬಗೆಗುರ್ವಿದುದುತ್ಸವಂ ಮುಡ
ಲ್ತುಡದುರ್ದು ಭೀತಿ ಬೇರ್ವಱಿದು ದೇೞ್ಗಿಯನಾಳ್ದುದು ರಾಗಸಂಪದಂ.

ಚಿಂತಾತುರನಾಗಿ ಬೆಳ್ಪಳಿಸಿ ಬೇವಸವನ್ನು ತಳೆದ ಧನಂಜಯನು–

ಉೞಿವೆಳಗು ಸಂಜೆ ನಸುಮು
ರ್ಬಳುರ್ದಂಬರದಂತೆ ತಿಳಿವುರಾಗಂನೆಗೞ್ದ
ಮ್ಮಳಮನೊಳಕೊಂಡ ಬಗೆಯಿಂ
ತಳವೆಳಗಾಗುತ್ತೆ ಪಾರ್ಥನ್.........

ಶಿವನನ್ನು ನಾನಾ ಪ್ರಕಾರವಾಗಿ ಭಜಿಸಿ ಆತನ ಕ್ಷಮೆಯನ್ನು ಯಾಚಿಸುತ್ತಾನೆ. ಸದಾಶಿವನ ಸ್ವಸ್ವರೂಪವನ್ನು ಕಂಡೊಡನೆಯೇ ಆತನ ಕಾಲಮೇಲೆ ಬಿದ್ದು ದೈನ್ಯದಿಂದ ಕ್ಷಮೆಬೇಡಿ ತನ್ನ ಮತ್ತು ತನ್ನ ವಂಶದವರ ಹುಟ್ಟು ಇಂದು ಸಫಲವಾಯಿತೆಂದು ಹರ್ಷಿಸುತ್ತಾನೆ. ಭಕ್ತವತ್ಸಲನಾದ ಶಿವನು ಅರ್ಜುನನನ್ನು ಮನ್ನಿಸಿ ಗುಹಗಜಾಸ್ಯರನ್ನು ಅಪ್ಪುವ ತೋಳ್ಗಳಿಂದ ಅಪ್ಪಿ ಅವನ ಇಷ್ಟಾರ್ಥವನ್ನಿತ್ತು 'ನಿನಗೆ ಕುಂದೆಂದುಂವಲಂತೋಱದು' ಅಂತ ಅರಿಯಂಗೆಲ್ದಪೆ, ಸೌಖ್ಯಮಕ್ಕುಂ'ಎಂದು ಹರಸುತ್ತಾನೆ. ಗಿರಿಜೆಯೂ ಅಂಜನಾಸ್ತ್ರವನ್ನು ನೀಡುತ್ತಾಳೆ.

ಹೀಗೆ ಅರ್ಜುನನು ಶಿವನಿಗೆ ಸಮನಾಗಿ ಕಾದು, ಶಿವನ ಮನ ವೊಪ್ಪುವಂತೆ ನಿಶ್ಚಳತೆಯಿಂದ ತಪವೆಸಗಿ ಶಿವನಿಂದಲೇ ಮೆಚ್ಚುಗೆಯನ್ನು ಪಡೆದಿದ್ದಾನೆ.

## ೫. ಕೃತಿವಿಮರ್ಶೆ

ಶಬರಶಂಕರವಿಳಾಸ ಮಹಾಕಾವ್ಯವೂ ಅಲ್ಲ, ಖಂಡಕಾವ್ಯವೂ ಅಲ್ಲ. ಅದೊಂದು ಮಧ್ಯಮಕಾವ್ಯ. ಈ ಕಾವ್ಯದಲ್ಲಿ ಚಿತ್ರಿತವಾಗಿರುವುದು ಶಿವ ಲೀಲೆ. ಶಿವಕರುಣೆ ನಿಜವಾದ ಭಕ್ತನ ಎಡೆಗೆ ಯಾವ ಯಾವ ರೀತಿಯಲ್ಲಿ ಹ ರಿದು ಬರುತ್ತದೆಯೋ, ಹಾಗೆ ಹರಿದು ಬಂದ ಒಂದೊಂದು ರೀತಿಯೂ ಒಂದೊಂದು ಲೀಲೆಯಾಗುತ್ತದೆ. ಆ ಲೀಲೆಯ ಉದ್ದೇಶ ಭಕ್ತರ ಇಷ್ಟಾರ್ಥ ವನ್ನು ನೆರವೇರಿಸುವುದರ ಜೊತೆಗೆ ಲೋಕಕಂಟಕ ನಿವಾರಣವೂ ಆಗಿ ರುತ್ತದೆ. ಈ ಶಬರಶಂಕರಲೀಲೆಯಲ್ಲಿ ಭಕ್ತನಾದ ಅರ್ಜುನನಿಗೆ ವರಪ್ರದಾನ ಮಾಡುವಲ್ಲಿ, ಲೋಕಕಂಟಕನಾದ ಮೂಕದಾನವನ ಸಂಹಾರವೂ ಆಗಿ ಲೋಕಕಲ್ಯಾಣವೂ ಸಾಧಿತವಾಗಿದೆ. ಒಟ್ಟಿನಲ್ಲಿ ಈ ಕಾವ್ಯದಲ್ಲಿ ಕಾಣು ವುದು ಲೀಲಾಪ್ರಿಯನಾದ, ಭಕ್ತಿಕಂಪಿತನಾದ ಶಿವನ ಕರುಣೆ, ಭಕ್ತನಾದ ಅರ್ಜುನನ ತಪೋನಿಷ್ಠೆ.

ಇದು ಕವಿದೃಷ್ಟಿಗೆ ' ಕಿರಾತಾರ್ಜುನೀಯ ' ಮಾತ್ರವಲ್ಲ. 'ಶಬರಶಂಕರ ವಿಲಾಸ' ಅಥವ 'ಕಿರಾತರುದ್ರಲೀಲೆ'. ಇದು ' ಉರುತರಶಿವಲೀಲೆ ' ಗಳಲ್ಲಿ ಒಂದು. ತನ್ನ ಕೃತಿಯಕಡೆಯಲ್ಲಿ—

ಪದಿನೈದನೆಯದೆನಿಸುವ
ಮದನಾರಿಯ ಶಬರಲೀಲೆಯಂ ವಸ್ತುಕ ಮಾ
ರ್ಗದೊಳೊರೆದೆಂ

ಎಂದು ಹೇಳುತ್ತಾನೆ. ಕಾವ್ಯದ ಪ್ರಧಾನ ಪಾತ್ರ, ಸಾವ ಕೆಡುವ ಸಾಮಾನ್ಯ ಮಾನವನಲ್ಲ ; ದೇವಾಧಿದೇವನಾದ ಪರಮೇಶ್ವರ. " ಶಿವನಂ

ತದೀಯ ಶರಣವ್ರಜಮಂ" ಬಲ್ಲಂತೆನುತಿಸುವುದೇ ತನ್ನ ಕಾವ್ಯದ ಉದ್ದೇಶ, ಎನ್ನುವ ಮನೋಧರ್ಮವುಳ್ಳ ಕವಿ, ಇವನು. ಶಿವನನ್ನು, ಆತನ ಶರಣರ ಮಹಿಮೆಯನ್ನು ಬಣ್ಣಿಸುವುದರ ಮೂಲಕವೇ ಕವಿಯ ಆತ್ಮೋದ್ಧಾರ ಎನ್ನುವ ಶ್ರದ್ಧೆಯನ್ನು ಮೂಲವಾಗಿ ಉಳ್ಳ ಹರಿಹರನ ಕಾವ್ಯ ಮಾರ್ಗದ ಯಾತ್ರಿಕನಾದ ಷಡಕ್ಷರಿಯಲ್ಲಿ ಹರಿಹರನ ಕಾವ್ಯಧರ್ಮ, ಮನೋಧರ್ಮಗಳೆರಡೂ ಚಂಪೂರೀತಿಯಲ್ಲಿ ಪ್ರಕಟಗೊಂಡಿರುವುದನ್ನು ಇಲ್ಲಿ ಕಾಣಬಹುದು. ಕಾವ್ಯದ ಅಂತರಂಗದಲ್ಲಿ ಹರಿಹರಾದಿಗಳನ್ನು ಅನುಸರಿಸಿದರೂ, ಬಹಿರಂಗದಲ್ಲಿ ಎಂದರೆ ಶೈಲಿಯಲ್ಲಿ, ಈತ ಹಳೆಯ ಕವಿಗಳ ಚಂಪೂ ರೀತಿಯನ್ನು ಮೆಚ್ಚಿಕೊಂಡಿದ್ದಾನೆ. ಕವಿ ಎಷ್ಟಾದರೂ ಉಭಯ ಭಾಷಾಪಂಡಿತ. ಸಂಸ್ಕೃತದ ಪದಗುಂಫನಾ ವೈಭವವನ್ನೂ, ಕನ್ನಡದ ದೇಸಿಯ ಸೊಗಸನ್ನೂ ಕಂಡು ಉಂಡ ಕವಿ ತನ್ನ ಕವಿತಾ ಚಾತುರ್ಯದ ವಿಲಾಸಕ್ಕೆ ಚಂಪುವನ್ನೇ ಶರಣುಹೋದುದು ಆಶ್ಚರ್ಯವೇನಲ್ಲ.

ಕವಿ ಶಬರಶಂಕರವಿಳಾಸವನ್ನು ಮೊದಲು ಮಾಡುವ ಸಂದರ್ಭದಲ್ಲಿ ತನ್ನ ಕೃತಿಯನ್ನು ಕುರಿತು:—

ಇದು ಪೊಸರೀತಿ ನೋಡಿದು ನವೀನಮಲಂಕೃತಿ ನವ್ಯಭಾವಮಿಂ
ತಿದು ನವವೃತ್ತಿ ಲೇಸಿದು ರಸಸ್ಥಿತಿ ನೂತ್ನಮಿದಲ್ತೆ ನೂತನಂ
ಪದರಚನಾವಿಲಾಸಮಿದು ಕಬ್ಬಮಪೂರ್ವಮಿದೆಂದು ಕಬ್ಬಿಗರ್
ಪದೆದೊಲವಿಂದೆ ಕೀರ್ತಿಸೆ ನಿಮಿರ್ಚುವೆನೀ ಸುಭಗಪ್ರಬಂಧಮಂ

ಎನ್ನುತ್ತಾನೆ. ಸಾಮಾನ್ಯವಾಗಿ ಸರ್ವ ಕವಿಸಹಜವಾದ ಈ ಅಗ್ಗಳಿಕೆಯ ಮಾತುಗಳ ಸತ್ಯಾಸತ್ಯತೆಯನ್ನು ಅವರವರ ಕಾವ್ಯಗಳೇ ಬಿಚ್ಚಿತೋರುತ್ತವೆಯಾದರೂ ಈ ಬಗೆಯ ಆತ್ಮಪ್ರತ್ಯಯ ಕನ್ನಡ ಕಾವ್ಯಮಾರ್ಗದಲ್ಲಿ ಒಂದು ಸಂಪ್ರದಾಯವೂ ಹೌದು. ಷಡಕ್ಷರಿಯ ಈ ಅಗ್ಗಳಿಕೆ, ಅವನ ಕಾವ್ಯವನ್ನು ಓದಿದಾಗ ಬಹುಮಟ್ಟಿಗೆ ಸಾರ್ಥಕವಾಗಿರುವುದನ್ನು ಓದುಗರು ಕಾಣದೆ ಇರುವುದಿಲ್ಲ.

'ಇದು ಪೊಸರೀತಿ' ಎಂದು ಕವಿ ಹೇಳಿರುವ ಮಾತು ನಿಜ. ಶಬರ

ಶಂಕರ ವಿಳಾಸದ ಕಥೆಯನ್ನು ಹಿಂದಿನ ಕವಿಗಳೆಲ್ಲಾ ಬಹುವ.ಟ್ಟಿಗೆ ಮೂಲಭಾರತದ ರೀತಿಯಲ್ಲಿ ಚಿತ್ರಿಸಿದರೆ ಈ ಕವಿ ಆ ಬಗೆಯ ಕಥನ ರೀತಿಯನ್ನೇ ಮುರಿದು, ಒಂದು 'ಪೊಸರೀತಿ'ಯಲ್ಲಿ ಕಾವ್ಯವನ್ನು ಆರಂಭಿಸಿದ್ದಾನೆ. ಉಳಿದೆಲ್ಲ ಕಿರಾತಾರ್ಜುನ ಪ್ರಸಂಗದ ಕಥೆಯೂ ಮೊದಲಾಗುವುದು ಪಾಂಡವರ ಕಥೆಯಿಂದ. ದ್ವೈತವನದಲ್ಲಿ, ವನವಾಸ ದಲ್ಲಿ, ಪಾಡಳಿದ ಪಾಂಡವರಿಗೆ ವೇದವ್ಯಾಸರು ಬಂದು ಪಾಶುಪತಾಸ್ತ್ರಸಾಧ ನೆಗೆ ಸೂಚನೆ ಕೊಡುವ ಕಥೆಯಿ:ಂದ. ಈ ರೀತಿಯನ್ನು ತೊರೆದು, ಕವಿ, ಆ ಭಾಗದ ಕಥೆಯನ್ನು ಮುಂದೊಮ್ಮೆ ಪ್ರಾಸಂಗಿಕವಾಗಿ ಕೇವಲ ಒಂದು ಪದ್ಯದಲ್ಲಿ ಸೂಚಿಸಿ, ನೇರವಾಗಿ ಶಿವನ ಸಭೆಯ ವರ್ಣನೆಯಿಂದಲೇ ಕಾವ್ಯಾ ರಂಭಮಾಡಿರುವುದು ಒಂದು 'ಪೊಸರೀತಿ' ಎನ್ನಬಹುದು. ಆದರೆ ಈ ಪೊಸರೀತಿ ಷಡಕ್ಷರಿಗೆ ಮಾತ್ರ ವಿಶಿಷ್ಟವಾದುದೇನಲ್ಲ; ವೀರಶೈವ ಕಾವ್ಯ ಮಾರ್ಗದಲ್ಲಿ ನಡೆದವರೆಲ್ಲರ ರೀತಿಯೂ ಇದೇ. ಬಹುಮಟ್ಟಿಗೆ ಎಲ್ಲ ವೀರ ಶೈವ ಕವಿಗಳ ಕಾವ್ಯವೂ ಆರಂಭವಾಗುವುದು ಶಿವನ ಸಭೆಯ ದೃಶ್ಯದಿಂದ, ಕಡೆಯಾಗುವುದೂ ಶಿವನ ಮಹಿಮೆಯನ್ನು ಪ್ರಕಟಿಸುವ ಒಂದು ಲೋಕೋ ತ್ತರವಾದ ಘಟನೆಯಿಂದ.

ಕಥಾರೀತಿಯಲ್ಲಿ ಕವಿಯು ಬಿಟ್ಟಿರುವ ಮತ್ತೊಂದು ಸಂದರ್ಭವೆಂದರೆ ರಂಭಾಪ್ಸರೆಯರಿಂದ ಅರ್ಜುನನ ತಪೋಭಂಗ ಪ್ರಯತ್ನದ ಪ್ರಸಂಗ. ಈ ಪ್ರಸಂಗವು ಕಿರಾತಾರ್ಜುನೀಯ ಮತ್ತು ಪಂಪಭಾರತದಲ್ಲಿ ಕಾಣುತ್ತದೆ. ಶೃಂಗಾರದ ವರ್ಣನೆಗೆ ಇದು ಒಂದು ಅನುಕೂಲವಾದ ಸಂದರ್ಭವಾಗಿ ದ್ದರೂ ಷಡಕ್ಷರಿಯು ಇದನ್ನು ಕೈಬಿಟ್ಟಿರುವುದು ಔಚಿತ್ಯ ಎನುವುದಕ್ಕಿಂತ ಆಶ್ಚರ್ಯ ಎನ್ನಬಹುದು.

ಕಡೆಯಲ್ಲಿ ಶಬರನಿಗೂ, ಅರ್ಜುನನಿಗೂ ಮುಷ್ಟಿಯುದ್ಧವಾದಾಗ ಶಿವನ ಮುಷ್ಟಿಘಾತಕ್ಕೆ ಅರ್ಜುನನು ರುಧಿರಾರ್ದ್ರಮೂರ್ತಿಯಾದನೆಂದು ಮೂಲ ಭಾರತದಲ್ಲೂ, ಹೋರಾಟದ ರಭಸದಲ್ಲಿ ಮೇಲೆ ನೆಗೆದ ಕಿರಾತನ ಕಾಲುಗಳನ್ನು ಹಿಡಿದು ಅಪ್ಪಳಿಸಲು ಅರ್ಜುನನು ಯತ್ನಿಸಿದಾಗ ಭಕ್ತ

ವತ್ಸಲನಾದ ಶಿವನು ಪ್ರೈದೋರಿದನೆಂದು ಕಿರಾತಾರ್ಜುನೀಯದಲ್ಲೂ, ಶಿವನ ಗಂಟಲನ್ನೇ ಪಾರ್ಥನು ಇಕ್ಕಿ ಮೆಟ್ಟಿದನೆಂದು ಪಂಪಭಾರತದಲ್ಲೂ ಬರುತ್ತದೆ. ಆದರೆ ಷಡಕ್ಷರಿಯಲ್ಲಿ, ಶಿವನ ಮುಷ್ಟಿಯಿಂದ ನೆತ್ತರುಕಾರಿ ನಿರ್ವಿಣ್ಣನಾದ ಪಾರ್ಥನು, ತಾನು ಲೋಕೈಕವೀರನಾಗಿದ್ದರೂ ಸಾಮಾನ್ಯ ಕಾಡ ಬೇಡನಿಗೆ ಸೋತೆನಲ್ಲಾ ಎಂಬ ದುಃಖದಿಂದ ಶಿವನನ್ನು ಮೊರೆವೋದಾಗ ಭಕ್ತವತ್ಸಲನಾದ ಶಬರವೇಷದ ಶಿವನೇ ನಿಜರೂಪುದೋರಿ ನಿಲ್ಲುವುದು ಒಂದು ಚಮತ್ಕಾರಕವಾದ ' ಪೊಸರೀತಿ 'ಯಂತೆ ತೋರುತ್ತದೆ.

ಈ ಒಂದೆರಡು ವಿಶಿಷ್ಟ ಪ್ರಸಂಗಗಳಲ್ಲಿ ಕಂಡುಬರುವ ಉದ್ದೇಶವಿಷ್ಟು: ಕವಿದೃಷ್ಟಿಗೆ ಪಾರ್ಥನ ತಪಸ್ಸಿಗೆ ಹಿನ್ನೆಲೆಯಾದ ಪಾಂಡವರ ಪ್ರಸಂಗವಾಗಲೀ, ಪಾರ್ಥನ ತಪಸ್ಸಿನ ಬಲ್ಮೆಯನ್ನು ಒರೆಗೆ ಹಚ್ಚಿನೋಡುವ ಇಂದ್ರನ ಪರೀಕ್ಷೆಯ ಸಂದರ್ಭವಾಗಲೀ, ಪಾರ್ಥನ ಪರಾಕ್ರಮದ ಪ್ರದರ್ಶನವಾಗಲೀ, ಮುಖ್ಯವಾದ ವಿಷಯುವಲ್ಲ. ಮುಖ್ಯವಾದುದೇನಿದ್ದರೂ ದೇವಾಧಿದೇವನಾದ ಶಿವನ ಲೀಲೆ, ಆತನ ಕರುಣೆ. ಆದುದರಿಂದ ಕವಿ ನೇರವಾಗಿ ನಮ್ಮ ದೃಷ್ಟಿಯನ್ನು ಶಿವನ ಪಾತ್ರದ ಮೇಲೆ ಕೇಂದ್ರೀಕರಿಸಿದ್ದಾನೆ. [1]"ಷಡಕ್ಷರಿ ಶೈವಸಂಪ್ರದಾಯದ ಮೂಲವನ್ನು ಮುಖ್ಯವಾಗಿ ಅನುಸರಿಸಿದ್ದಾನೆ. ಅಂತೆಯೆ ಈಶ್ವರನು ಮುಖ್ಯ, ಅರ್ಜುನನು ಗೌಣನಾಗಿದ್ದಾನೆ. ಕಥೆಯ ಪ್ರಾರಂಭ ಮತ್ತು ಬೆಳವಣಿಗೆಯಲ್ಲಿ ಅವಧಾರಣೆ ಈಶ್ವರ ಲೀಲೆಯಲ್ಲಿದೆ."

ಶಬರಶಂಕರವಿಳಾಸದಲ್ಲಿನ ಪಾತ್ರಸೃಷ್ಟಿ ಹೇಳಿಕೊಳ್ಳುವಂತಿಲ್ಲ. ಈಶ್ವರನೇ ಪ್ರಧಾನಪಾತ್ರ. ಭಕ್ತನಾದ ಅರ್ಜುನನ ತಪಸ್ಸಿನ ಉದ್ದೇಶವನ್ನರಿತು ಅವನೆಡೆಗೆ ಕಿರಾತವೇಷದಿಂದ ಬಂದು ಅವನೊಡನೆ ವಿವಾದದಲ್ಲಿ ತೊಡಗಿ, ಸೆಣಸಿ, ಪರೀಕ್ಷಿಸಿ, ಸುಪ್ರೀತನಾಗಿ ಪ್ರೈದೋರುವ ಭಕ್ತಜನಕಲಹಲೀಲಾಪ್ರಿಯ. ಅರ್ಜುನನ ಪಾತ್ರ ಗೌಣವಾದರೂ, ಆತನ ತಪೋನಿಷ್ಠೆ ಮತ್ತು

---

1 ಕನ್ನಡ ಸಾಹಿತ್ಯ ಚರಿತ್ರೆ ರಂ. ಶ್ರೀ. ಮುಗಳಿ: P. 351

ಕ್ಷಾತ್ರವೀರತೆ ತುಂಬ ಸೊಗಸಾಗಿ ಪ್ರಕಟವಾಗಿದೆ. ಶಿವನಿಗೂ ಅರ್ಜುನನಿಗೂ ನಡೆಯುವ ಕಾಳಗವೇ ಈ ಕಾವ್ಯದ ಕೇಂದ್ರ. ಆ ಘಟನೆಯಲ್ಲಿಯೇ ಇದರ ಜೀವಾಳ. ಇದು ಪಾತ್ರಪ್ರಧಾನವಲ್ಲದ, ಘಟನಾಪ್ರಧಾನವಾದ ಕಾವ್ಯ. ಕವಿ ತನ್ನ ವರ್ಣನಾ ವಿಲಾಸದಿಂದ ಆ ಒಂದು ಲೋಕಕಲ್ಯಾಣ ಕರವಾದ ಘಟನೆಯನ್ನು ಅತ್ಯಂತ ಪ್ರಭಾವಶಾಲಿಯಾಗಿ ಚಿತ್ರಿಸಿದ್ದಾನೆ. ಕಥೆಯ ಮೊದಮೊದಲು ಕವಿಯ ವರ್ಣನೆ ಸಂಪ್ರದಾಯದ ರೀತಿಯಲ್ಲಿ ತೆವಳಿಕೊಂಡು ನಿಧಾನವಾಗಿ ಸಾಗಿ, ಕಡೆಗೆ ಮೂಕದಾನವನು ವರಾಹನಾಗಿ ರಂಗಸ್ಥಳಕ್ಕೆ ಬಂದ ಕೂಡಲೇ ಆ ವರಾಹವನ್ನು ಹಿಂಬಾಲಿಸುವ ಬಾಣದಂತೆ ಕಥೆಯು ಓಡತೊಡಗುತ್ತದೆ. ಅಲ್ಲಿ ನಡೆಯುವ ಘಟನೆಯಲ್ಲಿ ಮಿಂಚಿನ ಕ್ರಿಯೆಯಿದೆ, ಶಬರನಿಗೂ ಅರ್ಜುನನಿಗೂ ನಡೆಯುವ ವಾದ ವಿವಾದದಲ್ಲಿ ನಾಟಕೀಯ ಪ್ರತಿಭೆಯಿದೆ. ಯುದ್ಧದ ವರ್ಣನೆಯಲ್ಲಿ ಚಮತ್ಕಾರವಿದೆ. ಶಿವನು ಮೈದೋರಿದಾಗ ಅರ್ಜುನನು ಮಾಡುವ ಸ್ತೋತ್ರದಲ್ಲಿ ಭಕ್ತಿರಸಾವೇಶದ ಹೊನಲಿದೆ. ಹೀಗೆ ಕವಿ ಶಬರಶಂಕರ ವಿಳಾಸದಲ್ಲಿ ಶಿವನ ಮಹಿಮೆಯನ್ನು ಪ್ರಕಟಿಸಿದ್ದಾನೆ. ಅಷ್ಟೇ ಅಲ್ಲ, ದೈವೀ ಕೃಪೆ ಭಕ್ತನ ಬಳಿಗೆ ಯಾವ ರೂಪದಿಂದ ಬರುವುದೋ ಹೇಳಲಾಗುವುದಿಲ್ಲ. ಅದು ಅರ್ಜುನನ ಬಳಿಗೆ ಶಬರನಾಗಿ ಬಂದು ಅವನ ಸತ್ವವನ್ನು ಪರೀಕ್ಷಿಸಿ ನೋಡಿ ವರವೀಯುವ ಕಿರಾತರೂಪಿಯಾಗಿ ಇಲ್ಲಿ ತೋರಿದೆ. ಹೊರವೇಷ ಕಿರಾತವಾದರೂ ಒಳವೇಷದಲ್ಲಿ ಭಕ್ತನು ಕಡೆಗೆ ಕಾಣುವುದು ಕರುಣಾಮಯನಾದ ಶಂಕರನನ್ನು ಎನ್ನುವ ನಿತ್ಯಸತ್ಯವನ್ನು ಈ ಕೃತಿ ಪ್ರತಿಮಿಸುತ್ತದೆ.

ಕವಿಯ ವರ್ಣನೆಗಳಲ್ಲಿ, ಅಲ್ಲಲ್ಲಿ ಆತನ ಉಜ್ವಲ ಪ್ರತಿಭೆಯ ಕಿಡಿಗಳನ್ನು ಕಾಣಬಹುದು. ಕವಿ ಮಾವಿನ ಮರವೊಂದನ್ನು ವರ್ಣಿಸುತ್ತಾ—

ತಳಿರೆಳವಾದಳಂ ಪುದಿದ ಪೂಗುಡಿ ಜಲ್ಲಿ ಮಡಲ್ತ ಮಲ್ಲಿಯುಂ
ಜ್ವಳಮುಕುಳಾಳಿ ಮುತ್ತು ಪವಳಂ ಕೊನರಾಗೆ ವನಾಬ್ಧಿಯಲ್ಲಿ ಕಣ್
ಗೊಳಿಪ ಪಡಂಗು ಮಾಮರಮದಾಗಿರೆ ಕೋಗಿಲೆ ನಟ್ಟಿಗೊಂಬಿನೊಳ್
ತಳೆದುದು ಕೂವಕಂಬದುದಿವತ್ತಿದ ನಾವಿಕನೊಂದು ಲೀಲೆಯಂ

ಎಂದು ವರ್ಣಿಸುವಲ್ಲಿ ಬೇರೆಯವರಲ್ಲಿ ಕಾಣದ ಒಂದು ಪೊಸರೀತಿಯನ್ನು ಗಮನಿಸಬಹುದು. ಅರ್ಜುನನು ತಪಸ್ಸಿಗೆ ನಿಂತಾಗ,

ನೀನಾನೆಂಬೆರಡೞಿದುದು
ಮಾನಸಮಂಭೋಧಿಯಾಲಿಕಲ್ಲಾಯ್ತು ಶಿವಂ
ತಾನಾದನೊ ತಾನೇ ಶಿವ
ನೇನಾದನೋ ಎಂಬ ತೆಱದಿನವನೊಪ್ಪಿರ್ದಂ

ಎಂದು ಅವನನ್ನು ವರ್ಣಿಸುವಲ್ಲಿನ ಪದ್ಯ ಬಲು ಸೊಗಸಾಗಿದೆ. ಶಬರಶಂಕರ ಲೀಲೆಗಾಗಿ ಶಿವನು ತಾಳಿದ ಶಬರನ ಚಿತ್ರವನ್ನು ಕವಿ—

ಜಡೆಗಳ ಬಂಬಲೇ ತಲೆದಳಿರ್ ಫಣಿ ಸುತ್ತಿದ ಬಳ್ಳಿ ತಾಳ್ದ ಬಾನ್
ಗಡಲದು ಪುಷ್ಪಮಾಲೆ ಗಱಿವೂಗಱಿ ತೆಳ್ಪಿಱಿತೆ ಬಗ್ಗಸಮ್ಮದೊ
ಳ್ಪುಡೆ ಪೊಸಚಲ್ಲಣಂ ಕರಿಯ ಕುಪ್ಪಸಮಾನೆಯ ಕೃತ್ತಿಯಂಗದೊಳ್
ತೊಡೆದ ವಿಭೂತಿಯುದ್ಗಮಪರಾಗವಿಲೇಪನಮಗ್ನಿಲೋಚನಂ

ಎಂದೂ, ಶಬರಿತಿಯಾದ ಪಾರ್ವತಿಯ ಚಿತ್ರವನ್ನು

ತಳಿರುಡೆ ಸಂಜೆಗೆಂಪು ಪೊಸಮುತ್ತಿನ ಹಾರಮೆ ತಾರಕಾಳಿ ತ
ಳ್ತಿರುಚಿ ಕಾಯಕಾಂತಿ ಕಡುಗಟ್ಟಲೆ ಮೂಗುತಿ ಮುತ್ತು ಶುಕ್ರಮಂ
ಡಳಮುಮುರ್ದೊಪ್ಪೆ ಭಿಲ್ಲಿಯ ವಿಳಾಸಮುನಾಳ್ದಿಸೆದಂದು ಸರ್ವಮಂ
ಗಳೆ ನಿಜಕಾಳರಾತ್ರಿವೆಸರಂ ಮಿಗೆ ಸಾರ್ಥಕಮಂ ನೆಗಟ್ಟಿದಳ್

ಎಂದೂ ಶಬರವೇಷಿಯಾದ ಶಿವನು ಇಂದ್ರಕೀಲದಲ್ಲಿ ಮಂದಾರಭೂಜಾತದ ನೆರಳಿನಲ್ಲಿ ಕುಳಿತಿರುವ ದೃಶ್ಯವನ್ನು—

ವಿಳಸನ್ಮಂದಾರಭೂಜಾತದ ಬೞಿನೆೞಲೊಳ್ ನಿಂದು ಚಂದ್ರಾಶ್ಮಪೀಠ
ಸ್ಥಳದೊಳ್ ಪೂಗೊಂಚಲೊಂದಂ ಪಿಡಿಪಡಿಗಡಿಗಾಘ್ರಾಣಿಸುತ್ತೊಲ್ಮೆಯಿಂ ಚೆಂ
ದಳಿರುದ್ಯತ್ತಾಲವೃಂತಂಬಿಡಿದು ಪದೆಪಿನಿಂ ಬೀಸೆ ಕಲ್ಯಾಣಿ ತಾಂ ಕಣ್
ಗೊಳಿಸಿರ್ದಂ ನೋಡುತುಂ ಬೇಂಟೆಯ ಪೊಸಪರಿಯಂ ಲೀಲೆಯಿಂ ಭಾಳನೇತ್ರಂ

ಎಂದೂ ವರ್ಣಿಸುವಲ್ಲಿ ಸುಂದರ ಭವ್ಯವಾದ ಚಿತ್ರಗಳನ್ನು ಚಿತ್ರಿಸಿದ್ದಾನೆ.

ಹೀಗೆಯೇ ಚಿತ್ರಕಾರನ ಕುಂಚಕ್ಕೆ ಯೋಗ್ಯವಾದ ಬಿಡಿಬಿಡಿ ಚಿತ್ರಗಳನ್ನು ಕೆತ್ತುವುದರಲ್ಲಿ ಕವಿ ಎತ್ತಿದ ಕೈ.

ಇಲ್ಲಿ ಪ್ರಧಾನವಾದುದು ಭಕ್ತಿ ಮತ್ತು ವೀರಭಾವ. ಕವಿ ಅತ್ಯುತ್ತಮ ಶಿವಭಕ್ತ. ಹರಿಹರನಂತೆ ಮೈದುಂಬಿ ಶಿವನ ಸ್ತೋತ್ರವನ್ನು ಮಾಡುವ ಹಂಬಲ ಈತನದು. ಕೈಲಾಸದಲ್ಲಿ ಋಷಿಗಳು ಮಾಡುವ ಸ್ತೋತ್ರ, ಶಿವನು ಪ್ರತ್ಯಕ್ಷನಾದಾಗ ಅರ್ಜುನನು ಮಾಡುವ ಸ್ತೋತ್ರ, ಇವು ಕವಿಯೇ ಮಾಡಿದ ಸ್ತೋತ್ರಗಳು. ಭಕ್ತಿ, ವೀರಭಾವ ಪ್ರಧಾನವಾದ ಈ ಕಾವ್ಯದಲ್ಲಿ, ಕವಿಯ ಶೃಂಗಾರ ವರ್ಣನಾ ಚಾತುರ್ಯಚಪಲ ಒಂದೆಡೆ ಆಭಾಸವನ್ನುಂಟು ಮಾಡಿದೆ. ಅರ್ಜುನನ ತಪಸ್ಸಿನ ಪ್ರಭಾವದಿಂದ ನಿಸ್ತೇಜರಾದ ಋಷಿಗಳ ತಂಡ ಬಂದು ಶಿವನ ಎದುರಿಗೆ ತಮ್ಮ ಇಂದ್ರಕೀಲ ನಗವ[1] ವರ್ಣನೆಯನ್ನು ಮಾಡುವಾಗ ಅಲ್ಲಿನ ಖಚರ ದಂಪತಿಗಳ ಪ್ರಣಯ ವಿಲಾಸವನ್ನು ಚಪ್ಪರಿಸಿಕೊಂಡು ಬಣ್ಣಿಸುತ್ತಾರೆ[1]. ಅವರ ವರ್ಣನೆಯಲ್ಲಿ 'ರಸಿಕ' ದೃಷ್ಟಿಯೇ ಹೆಚ್ಚಾಗಿದೆ. ಅವರ ಕಣ್ಣಿಗೆ ಒಂದು ಕಾಸಾರ 'ಸ್ಮರಶಸ್ತ್ರಸದನ'ದಂತೆ ಕಾಣಿಸುತ್ತದೆ; ಬೀಸುವ ಮಂದಮಾರುತ 'ಕಾಮುಕನಂತಿರೆ' ಸುಳಿಯುತ್ತದೆ; ಆನೆಯ ಕುಂಭಸ್ಥಳ 'ಮಲಯಜವಿಲಿಪ್ತಕುಚಕುಂಭ'ದಂತೆ ತೋರುತ್ತದೆ. ಹೀಗೆ ಸಾತ್ವಿಕವೇಷದ ಋಷಿಗಳ ಬಾಯಲ್ಲಿ ತಪಸ್ವೀ ಜನಕ್ಕೆ ಉಚಿತವಲ್ಲದ ಮಾತುಗಳೂ ಇಲ್ಲಿಬಂದಿವೆ.

ಷಡಕ್ಷರದೇವನ ಶಬರಶಂಕರವಿಳಾಸಕ್ಕೂ, ನಾರಣಪ್ಪನ ಭಾರತದಲ್ಲಿ ಬರುವ ಇದೇ ಪ್ರಸಂಗಕ್ಕೂ ಕಥಾ ಸಂಗತಿಯಲ್ಲಿ ಮಾತ್ರವಲ್ಲದೆ ಮಾತಿನ

---

1 ಈ ಭಾಗವನ್ನು ಸಂಗ್ರಹದಲ್ಲಿ ಸೇರಿಸಿಲ್ಲ.

## ರೀತಿಯಲ್ಲೂ ಹೋಲಿಕೆಗಳು ಕಂಡುಬರುತ್ತವೆ[1] ನಾರಣಪ್ಪನೊಬ್ಬನ

ಸುಮಾರು ೫೦ ಪದ್ಯಗಳಲ್ಲಿ ಒಂದೇರೀತಿಯ ಮಾತಿನ ಮತ್ತು ಭಾವದ ಏಕತೆಯನ್ನು ಕಾಣಬಹುದು. ಕುಮಾರವ್ಯಾಸ ಭಾರತ, ಅರಣ್ಯಪರ್ವ, ೬ ನೇ ಸಂಧಿಯ ೧, ೫, ೧೭, ೨೪ ೨೫ ೪೮ ೫೦ ೫೧ ೫೬ ೧೦೫ ೧೦೬ ಈ ಪದ್ಯಗಳಿಗೂ ಕ್ರಮವಾಗಿ ಈತನೊಳಾಂಪನಿನೋದವುಂಟು ೨೨ ೨೭ ' ರಿಪುಜಯಮನಿತ್ತು ಪೊರೆಪುರಮಥನಾ ೭ ೧೭ ೧೮ ೪೬ ಬೀಟಿಕ್ಕೊಟ್ಟನಾ ಪಾರ್ಥನಂ ೫ ೬ ೯ ೧೦ ೪೭ ೪೮ ಈ ಪದ್ಯಗಳಲ್ಲಿ ಕಾಣಬಹುದು. ಉದಾಹರಣೆಗಾಗಿ ಕೇವಲ ೨ ಪದ್ಯಗಳನ್ನು ಇಲ್ಲಿ ಕೊಡಲಾಗಿದೆ.

೧. ಬಿಸುಮಂತ್ರಾಸ್ತ್ರದಲಿಮುಸುಕಿದ
ರೈಸುವನು ಹರಸುಂಗಿದನು ಮಗು
ಳೇಸು ಕೂರಂಬುಗಳ ನೆಚ್ಚರೆ ಕಡಿದನಂಬಿನಲೀ
ಈಸುವೆಗ್ಗಳದಾರೆನಿಪಭಿ
ಜ್ಞಾಶಿಬೇಡಾ ಕ್ಷಾತ್ರತಾಮಸ
ವೇಸುಬಲುಹೋ ನಿಮ್ಮ ಜಾತಿಗೆ ರಾಯ ಕೇಳೆಂದ

ಎನಿತಂ ತಾನೆಚ್ಚನಸ್ತ್ರಪ್ರಕರಮನಭಿಮಂತ್ರಾನ್ವಿತಂಗೆಯ್ದು ಕೂರ್ಪಿಂ
ದನಿತಂ ಕಾಲಾಂತಕಂ ನುಂಗಿದನಸವಸದಿಂದಂತದಂ ಕಂಡುಮಾಶ
ಕ್ತಿನಿಯುಕ್ತಂ ವ್ಯಾಧನಲ್ಲಾವನೋ ತಿಳಿದಪೆನೆಂಬೀ ವಿಚಾರಕ್ಕೆ ಪಶ್ಚಾ
ದನೆ ಪಾರ್ಥಂ ಕ್ಷಾತ್ರದುಸ್ತಾಮಸಮಡಸಿದವಂಗಕ್ಕುಮೇ ಸದ್ವಿವೇಕಂ

೨. ಒಂದುದಶಶತಸಾವಿರದ ಹೆಸ
ರಿಂದ ಲಕ್ಷವು ಕೋಟಿಯಗಣಿತ
ದಿಂದ ನಿನಗಾಂತಭಟರಿಪುಗಳತಿಂದು ತೇಗುವುದು
ಬಂದು ಬೆಸನನು ಬೇಡುವುದು ತಾ
ನೊಂದು ಶರರೂಪಾಗಿ ಕತಮಂದ
ದಿಂದ ವರಮಂತ್ರೋಪದೇಶವನಿತ್ತಳರ್ಜುನಗೆ

ಮೊದಲೊಳಿದೊಂದು ಪತ್ತು ತುಡುವಲ್ಲಿ ಶತಂ ಬಿಡುವಲ್ಲಿ ಸಾಸಿರಂ
ಪದಮಿಡುವಲ್ಲಿ ವೈರಿಶರಸಂಗತಿಯಂ ತಳೆವಲ್ಲಿ ಲಕ್ಷಮ
ಗ್ಗದ ಗತಿಯಲ್ಲಿ ಕೋಟಿ ಸಮರಾಂಗಣದೊಳ್ ಗಣನಾವಿಹೀನಮ
ಪ್ಪ[illegible]ತಮಂ ತವಿಸಿ ನಿನ್ನೆಡೆಗೆಯ್ದುಗುಮೀ ಮಹಾಶರಂ

ರೀತಿಯೇ ಏಕೆ, ಪಂಪ, ರನ್ನ, ನಾಗಚಂದ್ರ, ಹರಿಹರ, ರಾಘವಾಂಕ, ಇವರುಗಳ ಭಾವವೂ ಅಲ್ಲಲ್ಲಿ ಕಾಣಿಸುತ್ತದೆ. ಅದರಲ್ಲೂ ಹರಿಹರನ ಪ್ರಭಾವವನ್ನು ವಿಶೇಷವಾಗಿ ಗಮನಿಸಬಹುದು. ಆದರೆ ಹಿಂದಿನ ಕವಿಗಳ ಭಾವವು ಷಡಕ್ಷರಿಯಲ್ಲಿ ಒಂದು ಹೊಸ ರೀತಿಯಲ್ಲಿ ಪಡಿಮೂಡಿದೆ. ಹಲವು ವೇಳೆ ಹಳೆಯ ಕವಿಗಳ ಭಾವ ಸೊಗಸಾದ ಅನುವಾದವಾಗಿಯೂ, ಮತ್ತೆ ಕೆಲವೆಡೆ ಉತ್ತಮ ಪರಿವರ್ತನಗಳಾಗಿಯೂ ಬಂದಿವೆ. ಕವಿ ಹಿಂದಿನವರ ಪ್ರಭಾವಕ್ಕೆ ಒಳಗಾಗಿದ್ದಾನೆ ಎಂದರೆ ಅದು ಆತನ ಕವಿತಾ ಸಾಮರ್ಥ್ಯದ ದೋಷವನ್ನು ತೋರುವುದಿಲ್ಲ ; ಹಿಂದಿನ ಕವಿಗಳ ಕಾವ್ಯದ ಭಾವಗಳನ್ನು ಮೆಚ್ಚಿ ಆಯ್ದುಕೊಂಡ ಆತನ ಕಲಾವಿವೇಕವನ್ನೂ, ಸಹೃದಯತೆಯನ್ನೂ ತೋರುತ್ತದೆ ಎನ್ನಬಹುದು. ಇದು ಅವನ ಅಭ್ಯಾಸದ, ಪಾಂಡಿತ್ಯದ ವಿಶಾಲತೆಯನ್ನೂ ತೋರಿಸುತ್ತದೆ. ಷಡಕ್ಷರಿಯ ಕಾವ್ಯರೀತಿಯನ್ನೂ ಅದೇ ಭಾವ, ಪದಪುಂಜ ಇವುಗಳನ್ನೂ ಉಪಯೋಗಿಸಿಕೊಂಡಿರುವವನೆಂದರೆ ಮುದ್ದಣ.[1]

ಕವಿಯ ಶೈಲಿ ಮನೋಜ್ಞವಾದುದು, ಝೇಂಕರಿಪ ತುಂಬಿಗಳಿಂಚರದಂತೆ ಮಧುರವಾಗಿದೆ. ಇಲ್ಲಿ "ಚಂಪೂಶೈಲಿಯ ಪ್ರೌಢಿಯಿದ್ದರೂ ಪ್ರಸಾದಕ್ಕೆ ಬಾಧೆಯಿಲ್ಲ."[2] "ಸಂಸ್ಕೃತಮಾರ್ಗದ ಬಿಗುವಿಗೂ, ಕನ್ನಡ ದೇಸಿಯ ಸರಳತೆಗೂ, ಅವೆರಡರ ಲಲಿತವಾದ ಮಿಶ್ರಣಕ್ಕೂ ಒಳ್ಳೆಯ ಉದಾಹರಣೆಗಳನ್ನು ಈತನ ಕೃತಿಗಳಿಂದ ಕೊಡಬಹುದು.[3]" ಷಡಕ್ಷರಿಯ ವೃತ್ತಗಳಲ್ಲಿ ಕಂಡುಬರುವ ಶಕ್ತಿ ಎಂದರೆ ಅದು ಭಾವಕ್ಕೆ, ರಸಕ್ಕೆ, ತಕ್ಕಂತೆ ಏರಬಲ್ಲುದು, ಇಳಿಯಬಲ್ಲುದು. ಅನೇಕವೇಳೆ ನಮಗೆ ವೃತ್ತಗಳನ್ನು ಓದುತ್ತಿದ್ದೇವೋ, ಷಟ್ಪದಿಯನ್ನೋದುತ್ತಿದ್ದೇವೋ ಎನ್ನುವ ಸಂದೇಹವೂ

---

1 ಶ್ರೀ ಎಸ್. ವಿ. ಪರಮೇಶ್ವರಭಟ್ಟರಿಂದ ಸಂಪಾದಿತವಾದ ರಾಮ ಪಟ್ಟಾಭಿಷೇಕದ ಪೀಠಿಕೆಯನ್ನು ನೋಡಿ:

2 ಕನ್ನಡ ಸಾಹಿತ್ಯ ಚರಿತ್ರೆ. ರಂ. ಶ್ರೀ. ಮುಗಳಿ P. 352.

3 ಶಿ. ಶಿ. ಬಸವನಾಳ. ಶಬರಶಂಕರವಿಳಾಸಂ, ಪ್ರಸ್ತಾವನೆ. 31.

ಬರುವಷ್ಟರಮಟ್ಟಿಗೆ ಲಲಿತವಾಗುತ್ತದೆ. ವೃತ್ತದ ಚೌಕಟ್ಟಿನೊಳಗೆ ಷಟ್ಪದಿಯ ನಡಿಗೆಯನ್ನು ತರುವ ಕವಿಯ ಕೌಶಲ ಪ್ರಶಂಸನೀಯವಾದುದು.

ಷಡಕ್ಷರಿಯು ಪ್ರತಿಭಾ ಸಂಪನ್ನನಾದಮಹಾಪಂಡಿತ- ಎಳೆಹರೆಯದಲ್ಲೇ "ಶಾಸ್ತ್ರಶ್ರೀರೋಹಣಗಿರಿಯ"ನ್ನೇರಿ, ಅಲ್ಲಿ 'ನವ ಕವಿತಾಚಿಂತಾರತ್ನ ವನ್ನು ಪಡೆದ ಪುಣ್ಯವಂತ. 'ಮಹಿಮಾಸ್ಪದ'ನಾದ ಶಿವನನ್ನೂ, ಆತನ ಶರಣರನ್ನೂ ಕುರಿತು ಹಾಡಿ ಆತ್ಮೋನ್ನತಿಯನ್ನು ಪಡೆದ ದಿವ್ಯಸಾಧಕ. ಅವನು ಉಭಯ ಭಾಷಾವಿಶಾರದ. ಅವನು ಮಹಾಕವಿ ಎನ್ನುವುದಕ್ಕಿಂತ ಮಹಾ ಪಂಡಿತನಾದ ಶ್ರೇಷ್ಠಕವಿ ಎನ್ನುವುದು ಹೆಚ್ಚು ಸತ್ಯ. ಇಂಥ ಕವಿಯ ಕೃತಿ.

ಜೇಂಗೊಡದಂತೆ ಝೇಂಕರಿಪ ತುಂಬಿಗಳಿಂಚರದಂತೆ ಪೆಪಂಸಾ
ಳ್ದಿಂಗಡಲಂತೆ ಪಣ್ತಸೆವ ಮಾಮರನಂತೆ ಪಯೋಜದಂತ ಚಿ
ಳ್ದಿಂಗಳ ಸೊಂಪಿನಂತೆ ಸುಸಿಲಾಸೆಯನಲ್ಲಳನೋಟದಂತೆ ಚಿ
ತ್ತಂ ಗೊಲಾಳರ್ಪುದೀಕೃತಿ ಷಡಕ್ಷರದೇವಕೃತಂ ರಸಜ್ಞರಾ

ಎನ್ನುವುದೇನೂ ಆಶ್ಚರ್ಯವಲ್ಲ.

**ಕೊನೆಯ ಮಾತು**:—ಈ ಒಂದು ಸತ್ಕೃತಿಯನ್ನು, ಕಥಾ ಸರಣಿಗೆ ಭಂಗಬಾರದಂತೆ, ಕೃತಿಯ ಮೆಯ್ಗೆಡದಂತೆ ಸಂಗ್ರಹಿಸಿದ್ದೇವೆ. ಇದರ ಸಂಗ್ರಹಕಾರ್ಯದಲ್ಲಿ ನಾವು ಬಹು ಮಟ್ಟಿಗೆ ಪ್ರೊ. ಶಿ. ಶಿ. ಬಸವನಾಳರ ಪಾಠಾಂತರಗಳನ್ನು ಆಧಾರವಾಗಿರಿಸಿಕೊಂಡು ಸಂದೇಹ ಬಂದ ಕಡೆ ನಮ್ಮದೇ ಒಂದು ಪ್ರತಿಯನ್ನು ಅನುಸರಿಸಿದ್ದೇವೆ. ಇದನ್ನು ಸುಂದರವಾಗಿ ಮುದ್ರಿಸಿ ಕೊಟ್ಟ ಶ್ರೀ ವಿಜಯಲಕ್ಷ್ಮೀ ಮುದ್ರಣಾಲಯದವರಿಗೂ, ಇದರ ಪ್ರಕಾಶನವನ್ನು ಕೈ ಗೊಂಡ 'ಅಚ್ಯುತ'ಸಾಹಿತ್ಯ ಮಾಲೆ ಮೈಸೂರು ಇವರಿಗೂ ನಾವು ಕೃತಜ್ಞರಾಗಿದ್ದೇವೆ. ಈ ರಸವತ್ಕೃತಿಯನ್ನು ಸಹೃದಯರು ಆದರದಿಂದ ಸ್ವಾಗತಿಸುವರೆಂದು ನಂಬಿದ್ದೇವೆ.

ಶಿವಮೊಗ್ಗ — ಜಿ. ಎಸ್. ಶಿವರುದ್ರಪ್ಪ
29–7–55 — ಬಿ. ಎನ್. ಶಾಸ್ತ್ರಿ

## ಒಪ್ಪೋಲೆ

| ತಪ್ಪು | ಒಪ್ಪು | ಪುಟ | ಪಂಕ್ತಿ |
|---|---|---|---|
| ಅರಾ | ಆರಾ | vii | ೪ |
| ವಾಗದ್ದುವು | ವಾಗಿದ್ದುವು | xi | ೧೭ |
| ರೆಲ್ಲತೂ | ರೆಲ್ಲರೂ | xvi | ೧೨ |
| ಕೋಣವೋ | ಕೋಣವೋ | xvii | ೬ |
| ಹೆದಗಿ | ಹೆದರಿ | xviii | ೧೫ |
| ಟೋಪ | ಟೋಪ | xviii | ೧೬ |
| ಕೆ | ಕೈ | xxi | ೧೬ |
| ಮೇಲೆರಗಿನ | ಮೇಲೆರಗಿದ | xxii | ೨೧ |
| ಜಿಗದ | ಜಗದ | xxiv | ೯ |
| ಸೌಂವರ್ಯ | ಸೌಂದರ್ಯ | xxv | ೧೮ |
| ಕಥೆ | ಕಥೆ | xxvi | ೬ |
| ಬೇಗ | ಬೇಗೆ | xxvii | ೧೩ |
| ಕತಮುಂದ | ನುತಮುದ | xlvi | ೨೩ |
| ಪೆಪಂ | ಪೆಂಪ | xlviii | ೧೦ |
| ದಂತ | ದಂತೆ | xlviii | ೧೧ |
| ಷದಕ್ಷರ | ಷಡಕ್ಷರ | xlviii | ೧೩ |
| ಲೊಕ | ಲೋಕ | ೧ | ೩ |
| ಪಾಶ್ವಮೇಘ | ಪಾರ್ಶ್ವಮೇಘ | ೧೧ | ೪ |
| ವಿಗೆ | ಮಿಗೆ | ೧೧ | ೧೦ |
| ಪುರಂಥರಂ | ಪುರಂದರಂ | ೧೪ | ೯ |
| ನಿಂತೆಂಬಾಂ | ನಿಂತೆಂದಂ | ೧೫ | ೩ |
| ಅಸಾಧ್ಯದಲ್ತುಂ | ಅಸಾಧ್ಯನಲ್ತು | ೧೫ | ೧೮ |
| ದ್ವಿವೀಸ | ದ್ವಿಮಾಸ | ೧೬ | ೧೪ |
| ಮೇಘವೃದಂ | ಮೇಘವೃಂದಂ | ೧೭ | ೧೨ |

| | | | |
|---|---|---|---|
| ಬೇಟಿಂ | ಬೇಂಟಿ | ೨೦ | ೧ |
| ಮಲ್ಲನೆ | ಮೆಲ್ಲನೆ | ೨೪ | ೧೪ |
| ಅರ್ಧೆಂದು | ಅರ್ಧೇಂದು | ೨೫ | ೨೦ |
| ಪಡೆಪಿನಿಂ | ಪದೆಪಿನಿಂ | ೨೬ | ೭ |
| ಕೊದಂಡ | ಕೋದಂಡ | ೩೦ | ೩ |
| ಮದುಮುಡಿಗಿ | ಮದಮುಡುಗಿ | ೩೧ | ೧೩ |
| ಅಡಗಿನಿಸರಿವೆಂ | ಅಡಗಿಸಲರಿವೆಂ | ೩೪ | ೪ |
| ಕೊಡಂಡ | ಕೋದಂಡ | ೩೮ | ೩ |
| ತಿಂಗೆಳು | ತಿಂಗಳು | ೩೯ | ೧೨ |
| ದಾಣ | ಬಾಣ | ೪೦ | ೬ |
| ಸೊಲ | ಸೋಲ | ೪೩ | ೨ |
| ಪರಮಥನ | ಪುರಮಥನ | ೪೪ | ೧೭ |
| ನೆಚ್ಚೊಡೆ | ನೆಚ್ಚೊಡೆ | ೪೬ | ೧೮ |
| ಪೊಡಳ್ದು | ಪೊದಳ್ದು | ೪೭ | ೧ |
| ಝೋಕರಿ | ಝೋಂಕರಿ | ೫೪ | ೩ |

# ಶಬರಶಂಕರವಿಳಾಸ ಪ್ರಬಂಧಂ

## ನಾಂದಿ

ಶ್ರೀಮತ್ಕಲ್ಯಾಣರೂಪಂ ಶರಭವನಗಜೋತ್ಸಂಗನಭ್ರಾಂತಯೋಗಾ
ರಾಮಾಂಚತ್ಪಾದಪದ್ಮಂ ಸುರುಚಿಗಣಪವಿಭ್ರಾಜಿತಂ ಸಾರಸತ್ವ
ವ್ಯಾಮಿಶ್ರಾಹೀನಚಂಚತ್ಕಟಕನಧಿಕದಿವ್ಯಾಗಮಂ ಸ್ವಸ್ಥಿಲೊಕ
ಸ್ತೋತ್ರೀಮಂ ಭ್ರಾಜಿಷ್ಣುವೆಮ್ಮಂ ಪೊರೆಗೆ ವಿತತಭಾಸ್ವತ್ಪ್ರಕಾಶಂ ಗಿರೀಶಂ ೧

ಸುರರಮಣೀಕದಂಬಕಬರೀಭರಕಾಂತಿಕಳಿಂದಜಾಂಬುವಿ
ಸ್ಫುರಿತಪದಾಂಬುಜಾತೆ ಕರಿರಾಣ್ಮುಖಷಣ್ಮುಖಮಾತೆ ಸದ್ಗುಣಾ
ಭರಣೆ ಕೃಪಾಸುಧಾರಸತರಂಗಿಣಿ ಸಾರಕಳಾಧುರೀಣೆ ಶಾಂ ೨
ಕರಿ ಪೊರೆಯೆನ್ನನಸ್ಮಿತಶುಭೋದಯೆ ಶೈಲಜೆ ಸರ್ವಮಂಗಳೆ

ಹರಭಕ್ತಿಪ್ರಮದಾ ಮುಖೈಕ ಮುಕುರಂ ಶೈವಾಗಮಾಂಭೋಜಭಾ
ಸ್ಕರಬಿಂಬಂ ಗುಣರತ್ನಭೂಷಣನುಮೇಶಧ್ಯಾನಸಂಪನ್ನನ
ಕ್ಷರಸದ್ಧರ್ಮಕಳೇವರಂ ಮೃಡಮುತಾಂಭೋರಾಶಿರಾಕಾಸುಧಾ
ಕರನಾದ್ಯಂ ವೃಷಭೇಶ್ವರಂ ಸಲಹುಗೆಮ್ಮಂ ಭಕ್ತಕಲ್ಪದ್ರುಮಂ ೩

ಕನಕಕ್ಷ್ಮಾಧರವಪ್ರದೊಳ್ ನೆಗಟ್ದು ವಪ್ರಕೀಡೆಯಂ ನೀಳ್ಕೆ ನಾ
ಕನದೀವಾರಿಯನೀಂಟೆ ಫೂತ್ಕರಿಸಿ ತತ್ಪಂಕೇಜಮಂ ಕೊಂಡು ಭೋಂ
ಕನೆ ನೀರಾಟವನಾಡಿ ಪಾಲ್ಗಡಲೊಳುದ್ಯದ್ಬಾಲಲೀಲಾಪ್ರವ
ರ್ತನನುಂ ತಾಳ್ದಿಭವಕ್ತ್ರನೀ ಕೃತಿಗಜಸ್ರಂ ಮಾಟ್ಕೆ ನಿರ್ವಿಘ್ನಮಂ ೪

ಗುರುಸೋಮನಾಥ ಹರಿಹರ
ಹರಕವಿ ಪದ್ಮರಸಮುಖ್ಯರಂ ಬಲವಂದಾ
ದರದಿಂದೆ ಮಣಿದು ನೆಗಟ್ದಪೆ
ನಃರುತರಶಿವಲೀಲೆ ವಿಃಸುಪ ಸತ್ಕೃತಿಯನಿದಂ ೫

## ಭೋಗಿವಿಭೂಷನೊಪ್ಪಿದಂ

ಕುಡಿದಂ ಕುಂಭಜನೆನ್ನನಾತ್ಮವಧುವೊಳ್ ಕೂಡಿರ್ದನೆಂದಿಂದರಂ
ಕಡೆದಂ ತನ್ನಹಿತಾದ್ರಿಗಾಂ ಶರಣಮೆಂದಾ ರಾಘವಂ ಕಟ್ಟಿ ಮೇಣ್
ತಡೆದಂ ಕಾದೊಳಕೆಯ್ದನೆಂದು ಪಗೆಯಂ ಹಾಲಾಹಲಂಗೊಟ್ಟೊಡಂ
ಮೃಡನೊರ್ವಂ ಮುಳಿಯಂ ಗಡೆಂದುಲಿವವೋಲುದ್ಘೋಷಿಕುಂ ಸಾಗರಂ ೧

ಪರಿವೃತನಾದ ತದ್ವನಧಿ ವಾರಿಸಮುನ್ಮಿಳಿತಾಲವಾಲದಂ
ತಿರೆ ಮಕರಂದಪೂರಮೆನೆ ನಿರ್ಝರಮಲ್ಲೆಱಗಿರ್ದ ವಾರ್ಧಿಕೋ
ತ್ಕರಮುಳರಾಜಿಯಂತೆಸೆಯೆ ಪೂತಲದೊರ್ಪ್ಪುವಕರ್ಣಿಕಾರಭಾ
ಸುರನಗದಂತೆ ಕಣ್ಗನಿದನಾಳ್ದುದು ಭೂರಿಸುವರ್ಣಭೂಧರಂ ೨

ಮರಮೆಲ್ಲಂ ಸುರಪಾದಪಂ ಮಿಸುಪ ಕಲ್ಲೆಲ್ಲಂ ಮಣಿಶ್ರೇಣಿ ನಿ
ರ್ಝರಮೆಲ್ಲಂ ಸುಧೆ ಧೇನುವೆಲ್ಲಮನಿಶಂ ಸ್ವರ್ಧೇನುವೃಂದಂ ವನೇ
ಚರರೆಲ್ಲರ್ ಖಚರರ್ ಲತಾಪ್ರತತಿಯೆಲ್ಲಂ ಕಲ್ಪವಲ್ಲೀಕುಲಂ
ಸಿರಿದಿಂತೊಪ್ಪುಗುಮೆಂದೊಡಾ ಗಿರಿಯ ಪೆಂಪಂ ಬಣ್ಣಿಸಲ್ ಬರ್ಕುಮೇ ೩

ಸುರತರುಮೂಲನೀಲಮಣಿವೇದಿಕೆಯಗ್ರದೊಳಿರ್ದು ಪಾಡುವ
ಚ್ಚರಿಯರ ಗಾನದಿಂಪು ಕಿವಿಯಂ ಪುಗೆ ಪೋಗದೆ ನಿಂದ ತನ್ನ ಮೆ
ಯ್ಯರಲೆಯ ಮೆಯ್ಯೊಳಿಟ್ಟ ಪುಳಕಾಂಕುರಮಂಗಮನೆಯ್ದೆ ನಾಂಟೆ ಕಾ
ಟ್ಪುರಮೆನೆ ಸೂಸುಗುಂ ಶಶಿ ಸುಧಾರಸಮಂ ನೆರೆದೀಂಟೆ ನಿರ್ಜರರ್ ೪

ಸುರಭೂಜಾತದ ತಳ್ತ ತಣ್ಣೆಳಲ ಚಂದ್ರೇಂದ್ರಾಶ್ಮಪೀಠಂಗಳೊಳ್
ತರದಿಂ ಮಂಡಿಸಿ ನೋಡುವಾಡುವ ಲಸತ್ಸಂಗೀತಮಂ ಪಾಡುವಾ
ದರದಿಂದೊಳ್ನುಡಿದೋರ್ಪ ಸಿಂಗರಿಪ ನಾನಾಲೀಲೆ ಕೆಯ್ಗಣ್ಮೆ ಕಿಂ
ಪುರುಷರ್ ಕಿನ್ನರರಚ್ಚರರ್ ಬಿನದಿಪರ್ ತತ್ಕಂದರಾಸ್ಥಾನದೊಳ್ ೫

ಪಾಡುವ ತುಂಬಿ ತೊಂಡುಗೆಡೆವಗ್ಗದ ಪಂಡಿತವಕ್ಕಿ ಸಾರ್ಚಿ ಬಾಯ್
ಗೂಡಿ ವಿಲಾಸದಿಂ ಕೆಲೆವ ಪಾರಿವಮೊಯ್ಯನೆ ಕೇಗಿ ನಲ್ಮೆಯಿಂ
ದಾಡುವ ಸೋಗೆ ಮಾವುಂದೊಳಿರ್ದು ಕುಕಿಲ್ವ ಪಿಕಂ ವಿಯೋಗಿಗೇಂ
ಮಾಡದೆ ಪೋಕುಮೇ ಮದನನಂಡಲೆಯಂ ನಗನಂದನಂಗಳೊಳ್ ೬

ತೊಳಗಿದುದಿಂತು ರಂಜಿಪ ಕನತ್ಕನಕಾಚಲದಗ್ರದೊಳ್ ಮಹೋ
ಜ್ವಳಮಣಿಶಾಲಮಾದಿಕಮುತಂಬರಮಾಟಮುನಾಳ್ದಗಟ್ ಸುಧಾ
ಸಳಿಲಸಮೃದ್ಧ ಮಿಂದ್ರಮಣಿಯಾಳ್ವರಿ ಬಜ್ಜರಗೊತ್ತಳಂಗಳ
ಗ್ಗಳಿಸಿರೆ ಪೆರ್ಮೆವೆತ್ತು ಪುರವೈರಿಪುರಂ ಕಳಧೌತಗೋಪುರಂ ೭

ಬಾಂದಳಮಂ ಪಳಂಚಲೆವ ಶೃಂಗವೃಷಧ್ವಜದಿಂದೆ ತಳ್ತು ಚೆ
ಲ್ವೊಂದಿದ ಭರ್ಮಹರ್ಮ್ಯದಿನಳಂಕೃತಿವೆತ್ತ ಗಣೇಶ್ವರಸ್ಫುರ
ನ್ಮಂದಿರಪಂಕ್ತಿಯಿಂದಮೃತಪೂರ್ಣಸರಸ್ಸುರಭೂರುಹೋಲ್ಲಸ
ನ್ನಂದನದಿಂ ವಿರಾಜಿಸಿದುದಗ್ಗದ ಚಾರುಪುರಂ ಪುರಾರಿಯಾ ೮

[ ವೃತ್ತಂ ] ಪೃಥುಳಬಲರೆನಿಪ್ಪಷ್ಟಭೈರವರ ಕಾಪಿನ ಸೀಮೆಯಿಂದೊಳಗೆ ಫಣಿವರಂಗಾದೊಡಮೆಣಿಸಲರಿದೆನಿಪ ಪೆಂಪಂ ಪಡೆದತಿಪ್ರಕಾಶಮನತಿಕೌತುಕಮನತ್ಯಂತವೈಭವಮನುರುತರ ಸೌಂದರ್ಯಮನೊಳಕೊಂಡು ಕಣ್ಗೆ ಮಂಗಳಮಾಗಿ ಮನಕೆ ಮನೋಹರಮೆನಿಸಿ ಸೊಗಯಿಪ ಶಿವರಾಜಧಾನಿಯಲ್ಲಿ,

ಬಳಸಿಡಿದಿರ್ದ ಮಾಣಿಕದ ಮಂಟಪರಾಜಿಯ ರಮ್ಯಹರ್ಮ್ಯಸಂ
ಕುಳದ ಕನತ್ಸುವರ್ಣಮಯಶಾಲದ ನಾಲ್ದೆಸೆ ಗೋಪುರಂಗಳು

ಜ್ವಳಿಸುವ ದಾರವಟ್ಟದ ಬೆಡಂಗವುರ್ದೊಪ್ಪಿರೆ ಮಧ್ಯದಲ್ಲಿ ಕಣ್
ಗೊಳಿಸಿದುದೇಕಕೋಟಿಮಿತಯೋಜನದೋಲಗಶಾಲೆ ಶೂಲಿಯಾ ೯

ಮರಕತವೇದಿ ಮಾಣಿಕದ ಬೋದಿಗೆ ನೀಲದ ಕಂಬಮಿಂದುಕಾಂ
ತರುಚಿರಕುಟ್ಟಿಮಂ ಪವಳದೊಳ್ದೊಲೆ ರನ್ನದ ಜಂತೆ ಪುಷ್ಯರಾ
ಗರುಚಿ ವಿತರ್ದಿ ಮೌಕ್ತಿಕಲಸತ್ಕಲಶಂ ಪರಿಶೋಭೆವೆತ್ತು ಬ
ಜ್ಜರದ ಕವಾಟವೊಂದೆ ಕರವೊಪ್ಪಿದುದೀಶಸಭಾನಿಕೇತನಂ ೧೦

ಅಂತೊಪ್ಪುವನಲರವಿಶಶಿಕೋಟಿರುಚಿಯಂ ಪಟಿದು ಪಜ್ಜ್ವಳಿಪ ವಿಪುಲ ಪ್ರಭಾಮಂಡಲಂ ಪುದಿದ ಮಹಾಸ್ಥಾನಮಂಟಪದ ಮಧ್ಯದೊಳೇಕಲಕ್ಷ ಯೋಜನದನಿತು ವಿಸ್ತೀರ್ಣಮನಿತುನ್ನತಿಯನಾಳ್ದು ಕಣ್ಗೊಳಿಪ ಚಿಂತಾಮಣಿಮಹಿತಮಂಗಳಮಯಃ ಮಹಾಪೀಠಮನೀಶಾನದಿಶೆಯೊಳೈಶ್ವರ್ಯಮೆ ಮೃಗೇಂದ್ರಾಕಾರಂಬೆತ್ತು ವಿಮಳಧರ್ಮಮೆ ವೃಷಭಾಕೃತಿವಡೆದನಲಾಶೆಯೊಳ್ ಸುಜ್ಞಾನಮೆ ಶಾಂತಿದೇವತಾರೂಪದಿಂ ನಿರೃತಿಯತ್ತಲ್ ವೈರಾಗ್ಯಮೆ ವೈಭವಸ್ವರೂಪದಿನನಿಲದಿಶೆಯೊಳ್ ಪರಿವಿಡಿಯಿಂ ಪೂರ್ವದಕ್ಷಿಣಪಶ್ಚಿಮೋತ್ತರಂಗಳೊಳ್ ಭೂತರೂಪಂದಾಳ್ದ ಧರ್ಮಮುಮಂ ವಿಕಟಾಂಗಮೆನಿಪ ಜ್ಞಾನಮಂ ಘೋರವೇಷಂಬಡೆದ ವೈರಾಗ್ಯಮಂ ವಿಕೃತಕಾಯಾನ್ವಿತಮಾದನೈಶ್ವರ್ಯಮಂ ಮೆಟ್ಟಿ ನಿಂದುಮಿಂತೆಣ್ದೆಸೆಯೊಳಿಣ್ರಿಜಿಂಪೊತ್ತು ಸೇವಿಸುತ್ತಮಿರೆ ತದಂತರಾಳಭಾಸುರಮೆನಿಸಿ, ಪದ್ಮಪೀಠದೊಳ್ ಕೌಸುಂಭತಲ್ಪಮೆನೆ ಕೆಂಬೊಳೆಪಿಂ ತೊಳಪ ಮಹಾಬಿಂದುವೆಂಬ ಮೆಲ್ವಸೆಯುಲ್ಲಿ ಗಾಡಿಯಿಂ ಮೂರ್ತಿಗೊಂಡು,

ಚಿದಚಿತ್ಪ್ರೇರಕನದ್ವಿತೀಯನನಘಂ ವೇದಾಂತವೇದ್ಯಂ ಕಲಾ
ಸ್ಪದನಾದ್ಯಂತವಿದೂರನಾರ್ಯನಜಡಂ ವಿಶ್ವಾಧಿಕಂ ವಿಶ್ವಮೂ
ರ್ತಿ ದಯಾವಾರ್ಧಿ ಜಗಜ್ಜನಿಸ್ಥಿತಿಲಯಾಧಾರಂ ಮಹಾಭೋಗವೋ
ಕ್ಷದನಬ್ಜಾಕ್ಷಮುಖಾಮರಾರ್ಚಿತಪದಂ ಕಣ್ಗೊಪ್ಪಿದಂ ಶಂಕರಂ ೧೧

ಬಾಂಬೊಟ್ಟ ತಳ್ತ ಕೆಂಜಡೆಯ ಬಲ್ಮುಡಿ ತಾಳ್ದ ಶಶಾಂಕಲೇಖೆ ಭಾ
ಳಾಂಬಕಮುಲ್ಲಸತ್ಫಣಿಪಕುಂಡಲಮಾಯತಬಾಹುಕೃತ್ತಿವ
ಸ್ತ್ರಂ ಬಗೆಗೊಳ್ವ ನುಣ್ಗರಿ ವರಾಭಯಶೂಲಮೃಗಾಂಕಪಾಣಿಯಂ
ಕಂಬಿಡದೊಪ್ಪುವದ್ರಿಜೆ ವಿರಾಜಿಸೆ ರಂಜಿಸಿದಂ ಮಹೇಶ್ವರಂ ೧೨

ನಿಸುಪಲರ್ಗಣ್ಣ ಕಾಂತಿ ತಿಳಿಜೊನ್ನವಿಡೆಂಬಿನಮಾಳ್ಪ ಭೂಷಣ
ಪ್ರಸರದೆ ರನ್ನದೊಳ್ಪಿಳಗು ಚೆಂಬಿಸಿಲಂತಿರೆ ತಾಳ್ದಲಂಪನೆ
ಣ್ದೆಸೆಯೊಳಲರ್ದು ಪರ್ಬಿ ವಿಸಟಂಬರಿಯುತ್ತಿರೆ ಮಂತ್ರದೇವತಾ
ವಿಸರವೊಲಲ್ದು ಸೇವಿಸೆ ಪದಾಬ್ಜಮನದ್ರಿಜೆ ಕಣ್ಗೆ ತೋರಿದಳ್ ೧೩

ಪಾಡುವ ಕಿನ್ನರರ್ ನಲಿದು ನರ್ತಿಸುವಪ್ಸರಿಯರ್ ಪೊದಟ್ಟು ಕೊಂ
ಡಾಡುವ ಚಂಡಕೀರ್ತಿಗಳುಘೋಜಯಯೆಂದಡಿಗೆಯ್ದೆ ಮೆಯ್ಯನೀ
ಡಾಡುವ ತಾಪಸರ್ ಮಣಿದನರ್ಘ್ಯಸುವಸ್ತುವನೊಲ್ದು ಕಾಣ್ಕೆಯಂ
ನೀಡುವ ನಿರ್ಜರೇಂದ್ರರೊಸೆದೊಪ್ಪಿದರೋಲಗದೊಳ್ ತ್ರಿಶೂಲಿಯಾ ೧೪

[ಆ ಓಲಗಶಾಲೆಯೊಳ್] ಪ್ರಣವಪಂಕೇರುಹಪರಮಹಂಸಂ, ಜನ್ಮಜರಾರುಜಾಮರಣವಿವರ್ಜಿತವಿಮಳಕಳೇವರಂ, ಭಜಕಭವಾಮಯನಿವಾರಣಮಹಾಭಿಷಕ್ತನುಂ, ಭಕ್ತಜನಮನೋರಥಪಾರಿಜಾತನನಾದ್ಯಂತನವಿದ್ಯಾರಹಿತಂ, ಸರ್ವಜ್ಞಂ, ನಿತ್ಯತೃಪ್ತಮನಾದಿಪ್ರಬೋಧಂ, ಸ್ವತಂತ್ರನಲುಪ್ತಾನಂತಶಕ್ತಿಯುಕ್ತನದ್ವಿತೀಯವೈಭವಂ, ಭೋಗಮೋಕ್ಷಪ್ರದಾಯಕನಪರಿಚ್ಛಿನ್ನಸಚ್ಚಿದಾನಂದಮಯಂ, ಸಕಲಹೃದಯಗುಹಾನಿವಾಸನವಾಙ್ಮನಸಗೋಚರಂ, ವಿಶ್ವಾಧಿಕಂ ವಿಶ್ವಭೇದ್ಯನುಮಾಸಹಿತಂ, ಮುಕ್ತಿಯ ಮುಗುಳಂತೆ, ಚಿತ್ತಿನ ಬಿತ್ತಿನಂತೆ, ಸತ್ಯದ ಸಾರದಂತೆ, ನಿತ್ಯತೆಯ ನಿಲವಿನಂತೆ, ಆನಂದದಾಗರದಂತೆ, ಪರಿಪೂರ್ಣತೆಯ ಪರಮಸೀಮೆಯಂತೆ, ಕರುಣದ ಕಡಲಂತೆ, ಧರ್ಮದಪೆರ್ಮೆಯಂತೆ, ಸಿಂಗರದ ಸೀಮೆಯಂತೆ, ಮಂಗಳದ ಮೈಮೆಯಂತೆ ಕಾಂತಿಯ ಕರುವಿನಂತೆ, ಶಾಂತಿಯ ಸರ್ವಸ್ವದಂತೆ, ಸರ್ವದೇವತಾಸಾರ್ವಭೌಮನವಧಿವಿಭವನದ್ವಿತೀಯನೊಪ್ಪುತಿರ್ದನಂತುಮಲ್ಲದೆಯುಂ,

ಕುವರನನೋರ್ವಳ್ ಮುದ್ದಿಸುತಪರ್ಣೆಯ ವಕ್ತ್ರಮನೋರ್ವಳ್ ನೇಹದು
ತ್ಸವದೊಳ್ ನೋಡುತುಂ ಪ್ರಮಥವರ್ಯರನಾದರಿಸುತ್ತುಮೊರ್ವಳ್ ಪಾ
ಡುವ ಸುರಸುಂದರೀರವಮನಾಲಿಸುತೊರ್ವಳ್ ಪೊದಟ್ದು ರಂಭೆಯಾ
ಡುವ ನವಲಾಸ್ಯಕೊರ್ವಳ್ ಮಿಗೆ ಮಚ್ಚುತೆ ಭೋಗಿವಿಭೂಷನೊಪ್ಪಿದಂ ೧೫



## ೨. ಮನೋರಥಮಿತ್ತುರಕ್ಷಿಪೆಂ

ಕೆದರ್ದ ಜಟಾಳಿ ಜಾಱಿದ ಮೃಗಾಜಿನಮುಣ್ಮಿದ ಘರ್ಮವಾರಿಯಿಂ
ಕದಡಿದ ಭೂತಿ ಕಂದಿದ ಮೊಗಂ ನಿಡುಸುಯ್ಪಿಸುಪಿಂದಮಿರ್ಪುಗುಂ
ದಿದ ತುಟಿ ಕಂಪನಂಬಡೆದ ಕೆಯ್ಯ ಕಮಂಡಲು ವಕ್ಷದೊಳ್ ತೊಡಂ
ಕಿದ ಗಳದಕ್ಷಮಾಲೆ ಬಿಡದೊಂದಿರೆ ಬಂದುದು ತಾಪಸವ್ರಜಂ ೧

ಅಂತು ತವಕಂಬೆತ್ತು ತಳ್ಳಂಕದಿಂ ಮಲ್ಲಟಿಗೊಂಡು ಮನದೊಳುರ್ಬಿ ದುಬ್ಬಸದುಬ್ಬೆಗಂ ಪರ್ಬಿ ಪರಿಕಲಿಸೆ ತಮತಮಗೆ ತಾಳಲಸದಳಮಾದ ಪೊಸತವಸಿಯೊರ್ವಂ ನೆಗಟ್ಟಿ ತಪಃಸಕದ ಮುಸಕಮನಸಮನಯನಂಗೆ ಬಿನ್ನಪಂಗೆಯ್ವ ಬಗೆಯಂ ಬಗೆದಂದಿಂದ್ರ ಕೀಲನಗೇಂದ್ರತಪೋವನದ ತಪೋಧನರ್ ತಳ್ವದೆಟ್ತಂದು ಸಭಾಂತರಾಳರತ್ನಜ್ಯೋತಿಯೆನಿಸಿ ರಮಣೀಯಮಾಗಿ ಸಾಲಂಕಾರಸಾರತರ ದಿವ್ಯಸಿಂಹಾಸನಾಸೀನನಾಗಿರ್ದುಮಾರಮಣನಂ ಕಂಡು ಮೆಯ್ವೆರ್ಚಿದ ಪರಮಸಾತ್ತ್ವಿಕ ಭಕ್ತಿಯಿಂ ಪಾದಾಬ್ಜದೊಳ್ ಮೆಯ್ಯಿಕ್ಕಿ ಮಣಿದೆಟ್ಟು ನಿಟಿಲತಟಘಟಿತಕರಸಂಪುಟರಾಗಿ ಸಾಲ್ಗೊಂಡು ಸಮುಚಿತಸ್ಥಾನದೊಳ್ ಸಂದಣಿಸಿ ನಿಂದು,

ಜಯಜಯ ಜಾಹ್ನವೀಧರ ಜನಾರ್ದನಪೂಜ್ಯ ಕಪರ್ದಿ ಕರ್ಮಸಂ
ಚಯಜಲದಪ್ರಭಂಜನ ನಿರಂಜನ ನಿರ್ಮದ ಭಕ್ತಹೃತ್ಕುಶೇ
ಶಯತರುಣಾರ್ಕ ತಂತ್ರನಿಗಮಸ್ತುತ ನಿರ್ಜಿತಕಾಲ ಭೂಧರಾ
ಶ್ರಯ ಭುಜಗೇಂದ್ರಹಾರ ಭುವನೇಶ್ವರ ಬಾಲಶಶಾಂಕಶೇಖರಾ ೨

ಪನಕಾದ್ಯರ್ಕಳ ಮಾನಸಾಂಬುಜಮರಾಳಂ ನೀನೆ ವೇದಾಂತಸಂ
ದನಕೇಳೀರಸ ಲೋಲದಿವ್ಯಶುಕರಾಜಂ ನೀನೆ ನಾದಾಂತಕಾಂ
ಚನಹರ್ಮ್ಯಾಂತರಭಾಸಮಾನಮಣಿದೀಪಂ ನೀನೆ ಶೈವಾಗಮಾ
ಘನಭೋಮಧ್ಯಮನೋಜ್ಞಬಾಲಮಿಹಿರಂ ನೀನೇ ಭವಾನೀಧವಾ ೩

ನರವಾಹಂ ಬಳ್ಕೆ ಶಕ್ರಂ ಸೆಡೆಯೆ ಹುತವಹಂ ಕಂದೆ ಕಾಲಂ ಕರಂ ಕುಂ
ದೆ ರಮೇಶಂ ಕುರ್ಗೆ ಧಾತ್ರಂ ಪೆಳಱೆ ದಿನಕರಂ ಹಮ್ಮುದಂಬೋಗೆ ಸರ್ವಾ
ಮರರೆತ್ತಂ ಭೀತಿಯಿಂದಂ ಪಡಲಿಡೆ ಜಗಮಂ ನುಂಗಲೆಟ್ಟಿರ್ಪ ರೌದ್ರಾ
ಕರಕಾಲಕ್ಷ್ವೇಳಮಂ ನೀಂ ತಳೆದು ಸಲಪಿದಯ್ ವಿಶ್ವಮಂ ವಿಶ್ವನಾಥಾ ೪

ಚರಣನ್ಯಾಸಕ್ಕೆ ಕೂರ್ಮಂ ಕುಸಿಯೆ ಫಣಿಫಣಾಮಂಡಲಂ ಬಳ್ಕೆ ಬಾಹಾ
ಪರಿಘೌಘಭ್ರಾಂತಿಯಿಂ ತಿಱ್ಱನೆ ತಿರುಗೆ ಮಹಾಪುಷ್ಕಲಾವರ್ತಕಂ ಭಾ
ಸ್ಕರಚಂದ್ರಾದಿಗ್ರಹವ್ರಾತಮುಮರುಣಜಟಾಘಾತದಿಂ ಸೂಸೆ ತಾರೋ
ತ್ಕರಮೆತ್ತಂ ಮೆಟ್ಟುತಂಥಾಸುರನನೆಸಗಿದಯ್ ನೃತ್ಯಮಂ ಮೃತ್ಯುವೈರೀ ೫

ರವಿಚಂದ್ರರ್ ಗಾಲಿಗಳ್ ಸಾರಥಿ ಬಿದಿ ಪಳವಾತಶ್ವಮುರ್ವೀತಳಂ ಭೂ
ರಿವರೂಥಂ ಮೇರು ಚಾಪಂ ಪೆದೆ ಫಣಿಪತಿ ಬಾಣಂ ಮುಕುಂದಂ ಸಮಂತಾ
ಗೆ ವಿಶೇಷಾಟೋಪದಿಂ ಮುಪ್ಪೊಟಲನುರಿಪಿ ದೇವಾಂಗನಾಬಂಧನಂ ಪಿಂ
ಗುವಿನಂ ನೀಂ ರಕ್ಷಣಂ ಗೆಯ್ಯದೊಡುಟುವರೆ ದೇವರ್ಕಳರ್ಧೇಂದುಚೂಡಾ

ಜಗಮೆಲ್ಲಂ ನಿನ್ನ ಕಣ್ಸನ್ನೆಯೊಳೆ ಜನಿಯಿಕುಂ ಬಾಳ್ಗುಮಳ್ಕಾಡುಗುಂ ಸ
ಗ್ಗಿಗರೆಲ್ಲರ್ ನಿನ್ನ ಪಾದಾಂಬುಜದ ಭಜನದಿಂ ಸಂಪದಂದಾಳ್ವರರ್ಕೇಂ
ದುಗಳೆಂದುಂ ನಿನ್ನ ತೇಜೋಬಲದೆ ಬೆಳಗುವರ್ ಲೋಕಮಂ ಮಾಯೆ ನಿನ್ನಾ
ಜ್ಞೆಗೆಸಂದೆಲ್ಲಾಗಳ್ಗುಂ ವರ್ತಿಪಳೆನೆ ನಿನಗಾರ್ ಸಾಟಿ ಪೇಳ್ ಭಾಳನೇತ್ರಾ

ಅನವದ್ಯಂ ನಿರ್ವಿಕಾರಂ ನಿರುಪಮಮಹಿಮಂ ನಿತ್ಯನಾದ್ಯಂತಶೂನ್ಯಂ
ಘನತೇಜೋರಾಶಿ ಪೂರ್ಣಂ ಪ್ರಣವಪರಿಗತಂ ಸಚ್ಚಿದಾನಂದರೂಪಂ

ಮಿನುತಾಜಾಂಡಾದಿಬೀಜಂ ಶ್ರುತಿಚಯಚಕಿತಸ್ತುತ್ಯನೇಕಂ ಪರಂ ಪಾ
ವನಶೀಲಂ ನೀನೆದಲ್ ನಿನ್ನಿರವನಱಿವರಾರ್ ವಿಶ್ವದೊಳ್ ಭೋಗಿಭೂಷಾ

ಉರುಲಿಂಗಾಕಾರದಿಂ ನೀನಿರೆ ಹರಿವಿಧಿಗಳ್ ಪಾದಮಂ ಮೌಳಿಯಂ ಕಂ
ಡರೆ ಬಹ್ವಾಯಾಸದಿಂದಾದೊಡಮಱಿಸಿಯುಮೆಲ್ಲಾಗಳುಂ ಸರ್ವಬೋಧಾ
ಕರಮಾಮ್ನಾಯೌಘಮುಂ ಕೀರ್ತಿಸಿಯುಮಱಿದುದೇ ನಿನ್ನಮಾ
ಹಾತ್ಮ್ಯಮಂ ಮಿ
ಕ್ಕರ ಮಾತೇಂ ದೇವ ನಿನ್ನುನ್ನತಿಯನಱಿವೊಡಾಕಾಶಗಂಗೋತ್ತಮಾಂಗಾ

ಕರೆಗಣ್ಮಿನ ಸುಖಜಲಮು
ಬ್ಬರಿಸುವ ರೋಮಾಂಚವೆಸೆಯೆ ಗದ್ಗದಗಳಿತಾ
ಕ್ಷರಮಂ ಸಂತವಿಡುತ್ತುಂ
ಗಿರಿಶನನೊಲವಿಂದೆ ಪೊಗಟ್ದರಾ ಮುನಿವರ್ಯರ್ ೫೦

ಇಂತೆಂದು ಪೊಗಟ್ದು ಮಗುಟ್ದುಂ ಮಣಿದ ಮುನಿವರರ ಸಂಸ್ತವಕ್ಕೆ ಸಂತಸಂ ಬಟ್ಟು ಕಂತುಹರಂ ಕಾರುಣ್ಯರಸಂ ತೆರೆಮ[illegible]ನಿಜಕಟಾಕ್ಷದಿಂ ನಿರೀಕ್ಷಿಸಿ,

ಆವ ಗಿರಿಯುಲ್ಲಿ ನಿಮ್ಮ ತ
ಪೋವನಮಾಯೆಡೆಯನುಱಿದುದೇಂ ಕಾರಣಮಿಾ
ತಾವಿಂಗೆ ಬಂದಿರಾವುದು
ಬೇವಸಮದನೊರೆವುದೆಮ್ಮೊಳೆಂದನುಮೇಶಂ ೫೧

ಎಂದು ಸರ್ವಜ್ಞಂ ತಾನಱಿಯದನಂತೆ ಬೆಸಗೊಳ್ವಿನಮಾ ತಪೋಧನರೊಳೊರ್ವಂ ಪ್ರಗಲ್ಭತಾಪಸಂ ಕಿಂಕರತೆಯನಾಳ್ದು ಕರಾಂಬುಜಂಗಳಂ ಮುಗಿದು ದೈನ್ಯಂದೋಱಿ ನಿಂದು,

ಅವಧರಿಪುದಖಿಳನಿರ್ಜರ
ನಿವಹಕಿರೀಟಾಗ್ರಘಟಿತನಿಜಚರಣ ಕೃಪಾ

ಮನೋರಥಮಿತ್ತು ರಕ್ಷಿಪೆಂ ೧೧

ಣರ್ಣವ ಭವಹರ ಹರ ಗಿರಿಜಾ
ಧವ ದೇವ ಮದೀಯಸಾಹಿತವಿಜ್ಞಾಪನಮಂ ೧೨

ಮಣಿಕೂಟಂ ಮಂಜುಳಪ್ರಸ್ಫುಟಮಣಿಮಕುಟಂ ನಿರ್ಝರಂ ತಾರಹಾರಂ
ಕ್ಷಣರೋಚಿಃಸ್ವರ್ಣಯುಕ್ತಂ ಸುರಪಮಣಿಮಹಾಕುಂಡಲಂ ಪಾರ್ಶ್ವಮೇಘಂ
ಪ್ರಣುತೋದ್ಯತ್ಕಾನನಂ ಪ್ರಸ್ಫುರಿತಹರಿತವಸ್ತ್ರಂ ಸಮಂತಾಗೆ ಭೂಭೃದ್
ಗುಣರುಂದ್ರಂ ಕಾಂತಿಸಾಂದ್ರಂ ಕಂಮೆಸೆದುದು ತಳ್ತಂ ಪ್ರಕೀಲಾಚಲೇಂದ್ರಂ

ಮುನಿಗಳ ಬೀಡು ಮುಕ್ತಿಯು ತವರ್ಮನೆ ಪೆರ್ಮೆಯ ಗೊತ್ತು ಘೋರಕಾ
ನನದೆಡೆ ಸಿಂಹಮುಖ್ಯಮೃಗದಿಕ್ಕೆ ಮಣಿವ್ರಜದಾಗರಂ ಮಹಾ
ಘನಸುರಸಿದ್ಧಚಾರಣರ ಚಾವಡಿ ಸಯ್ಪಿನ ಸೀಮೆ ದಿವ್ಯನಂ
ದನದ ನಿವಾಸವಾ ನಗಮದಂ ಪಿಂಗೆ ಬಣ್ಣಿಸಲಾರ್ಗೆ ಗೋಚರಂ ೧೪

ಚೆಂದಳಿದೊರ್ಗಂಗಲಿಂ ಮಿಸುಪಶೋಕೆ ಫಭಾಪಳಿ ತೀವಿ ತೋರ್ಪ ಮಾ
ಕಂದಮರಲ್ಗಳಿಂ ಪುದಿದ ಚಂಪಕಮುದ್ಗಮಮಂಜರೀವಿಳಾ
ಸಂದಳೆದಿರ್ಪ ಮಾಧವಿ ಮುಗುಳ್ತೊಡಗಿರ್ದ ಮನೋಜ್ಞಮಲ್ಲಿಕಾ
ಬೃಂದಮನೂನಪುಷ್ಪಚಯಮೊಪ್ಪಿರೆ ನಂದನಮಲ್ಲಿ ರಂಜಿಕುಂ

ತಳಿರೆಳಮಾದಳಂ ಪುದಿದ ಪೂಗುಡಿ ಜಲ್ಲಿ ಮಡಲ್ತ ಮಲ್ಲಿಯು
ಜ್ವಳಮುಕುಳಾಳಿ ಮುತ್ತು ಪವಳಂ ಕೊನರಾಗೆ ವನಾಬ್ಧಿಯುಲ್ಲಿ
ಗೊಳಿಪ ಪಡಂಗು ಮಾಮರಮದಾಗಿರೆ ಕೋಗಿಲೆ ನಬ್ಬೆಗೆಂಬಿ
ತಳೆದುದು ಕೂಪಕಂಬದುದಿವತ್ತಿದ ನಾವಿಕನೊಂದು ಲೀಲೆಯ ೧೬

ಕಳಕಂಠಂಗಳ ಬಗ್ಗಣೆ
ಗಿಳಿಗಳ ಚಪ್ಪರಣೆಯಳಿಗಳಂಚರವೆಸೆಗುಂ
ತಳಿರ್ಗಳ್ ತನಿವಣ್ಗಳ್ ಸುಮ
ಕುಳಂಗಳಿಡುಕಿಱಿದ ಚೂತಶಾಖಾಂತ ೧೭

ಕಾಮನ ಸಾಮಜಂ ಮಧುಮಹೀಶನ ಕೋಶಗೃಹಂ ಮಧುವ್ರತ
ಸ್ತೋಮದ ಪಾನಭೂಮಿ ಮಲಯಾನಿಲನಾಡುವ ಮಾಡುವೆಟ್ಟು ಮ
ಲ್ಲೀಪ್ಪುದುಲಾಸ್ಯಶಾಲೆ ಶುಕವೃಂದದ ಜೇವಣದಾಗರಂ ಬಟಿ
ಕ್ಕೀವಾರವುಲ್ತೆ ಪೂವಾರಮೆನುತ್ತ ಜನಸಿಟ್ಟನೋಱಿಲ್ದು ನಾಮಮಂ ೧೮

ತಳಿರ್ಗಳೆ ದಳ್ಪುರಿಯಲರಿಂ
ಬೆಳೆವಲರ್ವುಡಿ ದೂವೆ ಮಂತ್ರಘೋಷಂ ಪಿಕಸಂ
ಕುಳರವಮನೆ ಚೂತಂ ಕಣ್
ಗೊಳಿಪುದು ಹೋಮಾಗ್ನಿಯಂತೆ ಕಾಮಾಧ್ವರಿಯಾ ೧೯

ಸರಸಸರೋಜಕೈರವವಿರಾಜಿ ಸರೋವರದಿಂ ಮಹಾಫಲೋ
ತ್ಕರಪರಿನಮ್ರಭೂಜತತಿಯಿಂ ಪ್ರಮದಾಳಿಸಮುಲ್ಲಸಲ್ಲತಾಂ
ತರರುಚಿರಕುಂಜಪುಂಜದಿನಲಂಕೃತಿವೆತ್ತು ಪವಿತ್ರಸತ್ರಬಂ
ಧುರತರಮೊಪ್ಪುಗುಂ ಸುರಭಿಮಂದಮರುತ್ಪ್ರಯುತಂ ತಪೋವನಂ ೨೦

ರವಿ ಬಿಸುಗದಿರಂ ಕಱೆಯಂ
ದವಾಗ್ನಿ ಸವಿಧಸ್ಥಳಂಗಳೊಳ್ ಮೆಯ್ದೋಱಂ
ಪವನಂ ಬಿಱುಬಿಂ ಬೀಸಂ
ಜವನವರೆಡೆಯಾಡಲಣ್ಮರಾ ಮುನಿವನದೊಳ್ ೨೧

ದೇವೇಶ ನಿಮ್ಮ ಪದರಾ
ಜೀವದ ಭಾವನೆಯ ಪೆರ್ಮೆಯಿಂತುಟೊ ಮುನಿಪರ್
ತೀವಿರ್ದ ಬನದ ಪರಿಸರ
ದೋವರಿಯೊಳ್ ಮಿಟ್ಟು ಸುಟಿಯಲಳರ್ವುದಜಸ್ರಂ ೨೨

ಒಡಲಿಂ ಪುತ್ತಡರ್ದೆತ್ತಲುಂ ಮುಸುಕೆ ಪಾವೆಟ್ಟಾಡೆ ತನ್ಮಸ್ತಕಂ
ಬಡವಾದ್ಯನ್ನಖಪಂಕ್ತಿ ಬೇರ್ವರಿಯೆ ದೀರ್ಘಶ್ಮಶ್ರುವೊಳ್ ಪಕ್ಕಿಗೂ

ಡಿಡೆ ಸುತ್ತಂ ಜಡೆವಳ್ಳಿ ಪರ್ಬಿ ವೃಢಧ್ಯಾನಾಮೃತಾಸ್ವಾದನಂ
ಬಡೆದುದ್ಯತ್ತಪಮೂಂತು ನಿಶ್ಚಳತೆಯಿಂ ಕಣ್ಗೊಪ್ಪಿದರ್ ತಾಪಸರ್ ೨೩

ಶುಕ ಮಾರ್ಕಂಡೇಯ ಬೋಧಾಯನ ಕಪಿಲ ಕಣಾಧಾಕ್ಷಪಾದಾತ್ರಿಮೈತ್ರೇ
ಯಕ ಕಣ್ವಾಗಸ್ತ್ಯಪಾರಾಶರ ಭೃಗು ವಿಮದರ್ ಸೂತ ವಾಲ್ಮೀಕಿಗಳ್ ಶೌ
ನಕ ವಿಶ್ವಾಮಿತ್ರ ಧೌಮ್ಯ ಚ್ಯವನ ದಮನ ಶಾತಾತಪರ್ ಪೂರ್ಣಭದ್ರಾ
ದ್ಯಕರಿರ್ದರ್ ತತ್ತಪೋನಂದನದೊಳಘಹರಧ್ಯಾನಸಾಂದ್ರರ್
ಮುನೀಂದ್ರರ್ ೨೪

ತೊಳಪ ಕಿರೀಟಮುಜ್ವಳಮೃದುಸ್ಮಿತವಕ್ತ್ರಮನೂನಕಾಂತಿ ಸಂ
ಗಳಿಸಿದ ಕಾಯಮೂಂತ ಶರಚಾಪಮಡಾಯುಧಮಾಳ್ದ ಬೆನ್ನ ಬ
ತ್ತಳಿಕೆ ನವೀನ ಭೂಷಣಚಯಂ ಮೆಱೆಯುತ್ತಿರೆ ಬಂದನಲ್ಲಿಗ
ಚ್ಚಳಿಯದ ಜವ್ವನಂ ಮಿಸುಪ ಸೌಂದರನೊರ್ವನಪೂರ್ವವಿಭ್ರಮಂ ೨೫

ಅಂತೆಯ್ತಂದು ಗಿರಿಕಂದರದ ತತ್ತಪೋವನಮನವಂ ಪೊಕ್ಕು.

ತತವಿಧ್ಯುಕ್ತಪ್ರಕಾರಂ ಮಿಗೆ ಸದಮಳತೀರ್ಥಾಂಬುವಿಂ ಮಿಂದು ಶೈವ
ವ್ರತಮಂ ಕೈಕೊಂಡು ತಾಳ್ದಂ ಸುಸಿತಭಸಿತರುದ್ರಾಕ್ಷಮಾಲಾಳಿಯಂ ವಿ
ಶ್ರುತತತ್ತನ್ಮಂತ್ರದಿಂ ಮಂಗಳಮಯತನು ತಾನಾದನತ್ಯಂತಶಾಂತಿ
ಸ್ಥಿತಿಗಿತ್ತಂ ಚಿತ್ತಮಂ ತನ್ಮುನಿ ಶಿವಪದಸದ್ಭಕ್ತಿಸಂಪತ್ಪ್ರಯುಕ್ತಂ ೨೬

ಆಗಳಿಂತೆಸೆವಲ್ಲಿ ಪೆಸರ್ವೆತ್ತು ಮಿಸುಪ ಸರಪಸರೋವರದ ಪರಿಸರದ ಶುಕನಿಕರ ಮುಖವಿದಾರಿತಸಾರ ಸಹಕಾರ ಖರ್ಜೂರ ಕದಳೀ ಜಂಬೂ ದ್ರಾಕ್ಷಾದಿ ಪರಿಪಕ್ವ ಫಳಕುಳಕ್ಷರಿತಮಧುರತರರಸವಿಸರಪ್ರವಾಹದ ಪರಿಕಾಲ್ಗಳಿಂ ಬಳಸಿದ ಪರಮ ಕೈವಲ್ಯಕಲ್ಪತರುವೆಂಬಂತೆಸೆದು ನಳನಳಿಕೆವೆತ್ತ ವಿಮಳಕೋಮಳದಳತ್ರಯವಿಳಸಿತಸರಳಶಾಖಾನಿಕಾಯಾಕಲಿತ ಬಿಲ್ವವೃಕ್ಷದ ಕೆಳಗೆ ನಿಲ್ವುದುಂ, ತಪಸ್ಸಮುಚಿತ ಸ್ಥಳಮಿದಪ್ಪುದಿಲ್ಲಿಯೇ ನಿಲ್ಲೆಂಬ ಗಗನಗಂಭೀರವಾಣಿಯಂ ಕೇಳ್ದು ಮಹೋತ್ಸವಂದಾಳ್ದು ತದ್ವೃಕ್ಷಮೂಲಮನಾಶ್ರಯಿಸಿ ನಿಂದು,

ಅರೆಮುಗುಳ್ದಕ್ಷಿಗಳ್ ಮಿಡುಕುಗುಂದದ ಜೆಂದುಟಿ ನಿಶ್ಚಳಾಂಗಮು
ರ್ವರೆಯೊಳೆ ತಳ್ತ ಕಾಲ್ದುದಿ ಸಮುದ್ಧೃತ ಬಾಹುಗೆ ಬದ್ಧ ಚಾಪಭಾ
ಸುರತರಖಡ್ಗಮುಗ್ಗದ ಕಠಾರಿಯಡಾಯುಧಮಾಳ್ದ ಬೆನ್ನ ವಿ
ಸ್ಫುರಿತನಿಷಂಗಮೊಪ್ಪೆ ಪೊಸವೇಷದ ತಾಪಸನೊಪ್ಪಿ ತೋಱಿದಂ ೨೭

ತುದಿಗೊಳಿಸಿದಂಘ್ರಿಯಿಂದೆ
ತ್ತಿದ ಭುಜದಿಂ ನಿಮಿರ್ದ ದೇಹದಿಂ ನಿಳ್ಕಿದ ಚಿತ್
ಪದಮಂ ಮುಟ್ಟುವೆನೆಂದೋ
ವದೆ ನಿಮಿರ್ದೋರ್ವರಂತೆ ನಿಂದ ಮಾೞ್ಕೆಯೊಳೆಸೆದಂ ೨೮

ಆಗಳಾ ಪೊಸತಪಸ್ವಿ ತಪಮಿರ್ಪೆಡೆಯಱಿದು ಪುರಂಧರಂ ಧರಾಮರಾಕಾರಮಂ ತಾಳ್ದೆಯ್ತಂದು ಕಟ್ಟೆದಿರೊಳ್ ನಿಂದು ನಿರೀಕ್ಷಿಸಿ ಘನಗಂಭೀರಧ್ವನಿಯಿಂದಿಂತೆಂದಂ'

ಕರಜಪಮಾಲೆಯೆತ್ತ ಪೊಸಕೂರಸಿಯೆತ್ತ ವಿಭೂತಿಲಿಪ್ತವಿ
ಸ್ಫುರಿತಶಿವಾಕ್ಷಮಾಲ್ಯವಪುವೆತ್ತ ನಿಬದ್ಧನಿಷಂಗಚಾಪಸ
ಲ್ಲರಿ ಮಿಸುಪಂಗಮೆತ್ತ ಘನಶಾಂತಿ ಸಮುನ್ನತಿಯೆತ್ತ ನಿನ್ನ ಭೀ
ಕರತರವೇಷಮೆತ್ತ ಪಿರಿದದ್ಭುತಮೇನನೆಂದಪೆಂ ೨೯

ತಪಮಿರ್ಪ ತಾಪಸರನಾ
ನಪರಿಮಿತರನಱಿವೆನಭವವೇಷಾಂಕಿತರಂ
ವಿಪರೀತವೇಷಧರ ನಿ
ನ್ನುಪಮೆಯ ಕಿತ್ತಡಿಯನೆಲ್ಲಿಯುಂ ಕಂಡಱಿಯೆಂ ೩೦

ಎಂದು ನುಡಿದಾಖಂಡಲನ ತಪೋವಿಡಂಬನೋಕ್ತಿಯನವನಾಕರ್ಣಿಸಿ, ಕಣ್ದೆರೆದಭೀಕ್ಷಿಸಿ,

ಪೊಱಮೆಯ್ಯ ವೇಷದಿರವೇ
ತೆಱನಾದೊಡಮೇನೊ ಮಾನಸಾಭ್ಯಂತರದೊಳ್

ಕಱಿಕೆಗೊರಲನಂಘ್ರಿಡಳೆದ
ಬ್ಕಜಿಠೊಳಾಂ ಜಾಸಿಸಿ ಮಹೇಶನಂ ಮಚ್ಚಿಸುವೆಂ ೨೧

ಎನೆ ಮತ್ತಮಿಂದ್ರನಿಂತೆಂಚಾಂ

ಅತಿಸುಖಿ ನೀಂ ಸುಕುಮಾರಂ
ಪ್ರತಿದಿನಮಾಭೀಳತಪಮನೆಂತೆಸುಗುವೆ ಪೇೞ್
ಸಿತಗ ಶಿತಿಕಂಠನಲ್ಪ
ಪ್ರತಕ್ಕೆ ತನುತರತಪಕ್ಕಮೇನೊಲ್ದ ಪನೇ ೨೨

ಪೆಟಿಮಂ ಮರದುದಿಯು ಮಹಾ
ಫಳವಂ ಮಿಗೆ ಬಯಸುವಂತೆ ತನಗಸದಳವಂ
ತಿಳಿಯದೆ ಕಜ್ಜವನೆಸಗುವ
ಬಳರಹಿತಂ ಜಗದ ನಗೆಗೆ ಪಕ್ಕಾಗಿರನೇ ೨೩

ಮುನ್ನೆಂದುಂ ತಪಮಱಿಯದ
ನಿನ್ನಿರವೆತ್ತಭವನೊಲ್ಮೆ ತಾನೆತ್ತ ಪೊದ
ಟ್ಟುನ್ನತಿಕೆಗೆಡದೆ ತಳರೆನೆ
ತನ್ನಗರಿಪು ನಗುತೆ ಮತ್ತಮವನಿಂತೆಂದಂ ೨೪

ನೀನೆಂದುಕ್ತಿಯಿ ಸತ್ಯಮಾಗಮಚಯಕ್ಕಂ ತಾಪಸರ್ಗಂ ಭವಾ
ನೀನಾಥಂ ಸಲೆ ದುರ್ಲಭಂ ಪರಿಕಿಪಂದಂತಾದೊಡಂ ಭಕ್ತಿಸಂ
ಧಾನಕ್ಕಾತನಸಾಧ್ಯದಲ್ತು ದಿಟಮುದ್ಯದ್ಭಕ್ತಿಯಿಂ ತತ್ಪದ
ಧ್ಯಾನಂಬೆತ್ತು ದಯಾಬ್ಧಿಯಂ ಘನತಪಂಗೆಯ್ದೊಚ್ಚತಂ ಮಚ್ಚಿಪೆಂ ೨೫

ಸ್ಥಿರಭಕ್ತಿಭಾವದಿಂ ಶಂ
ಕರನಂ ಮಚ್ಚಿಸುವೆನೊಚ್ಚತಂ ಮಚ್ಚದೊಡೀ
ಹರಣಮನೀವೆಂ ತತ್ಪದ
ಸರಸಿರುಹಕ್ಕೆಂತುಮೆಡೆಯೊಳಾಂ ಬಿಟ್ಟಪೆನೇ ೨೬

ಎಂದು ಪೂಣ್ದವಂ ನುಡಿಯುಲೊಡನೆ,

ಬೆರಲೆತ್ತಿ ಪೊಗೞ್ದು ಮುಗುೞ್ದಿ
ಚ್ಚರಿವಟ್ಟತಿನಿಷ್ಠೆಗವನ ಸದ್ಭಕ್ತಿಗೆ ಜಂ
ಭರಿಪು ನಿಜರೂಪುದೋಱುತೆ
ಪರಸಿ ಮುದಂಬೆತ್ತು ಸಗ್ಗಕೆಯ್ದಿದನಿತ್ತಲ್ ೩೭

ಪೊಱಗಣ ಮಾಯಾಭ್ರಮೆಯುಂ
ಪಱಿದಿಕ್ಕಿ ಮನೋಬ್ಜಮಂಡಲತ್ರಯದೆಡೆಯೊಳ್
ವಿಱುವ ಕರೆಮರೆಯಿಲ್ಲದ
ಕುಱುಪೊಂದದ ಸೂಕ್ಷ್ಮರೂಪನಂ ಜಾನಿಸಿದಂ ೩೮

ನೆನೆದನನಂತತತ್ತ್ವಮಯನಂ ಪರಮಾತ್ಮನನಪ್ರಮೇಯನಂ
ಮುನಿಜನಮಾನಸಾಮಳಸರೋವರಹಂಸನನದ್ವಿತೀಯನಂ
ಘನನಿಗಮಾಂತಮೃಗ್ಯನನನಾಮಯನಂ ಚಿದಚಿತ್ಪ್ರಪಂಚರಂ
ಜನನನವಂ ತುರೀಯನನಖಂಡನಿಜೋನ್ನತಚಿತ್ಪ್ರಕಾಶನಂ ೩೯

ತ್ರಿದಿನಕ್ಕೊರ್ಮೆ ಫಲಾದನಂ ನೆಗೞ್ದದಾತಂಗೊಂದು ತಿಂಗಳ್ ದ್ವಿಮಾ
ಸದೊಳಾಱುಂ ದಿನಕೊರ್ಮೆ ತತ್ಫಳಚಯಾಹಾರಂ ತ್ರಿಮಾಸಂ ಬೞಿ
ಕ್ಕೊದವಿರ್ದತ್ತರುಕಂದಮೂಲಸುರಸಂ ನಾಲ್ತಿಂಗಳೊಳ್ ಜೀರ್ಣಪ
ರ್ಣದ ಸಂಸೇವನೆ ಮಾಸಪಂಚಕದೊಳಾಯ್ತಾತಂಗೆ ವಾತಾಶನಂ ೪೦

ಸ್ಥಿರತರಭಕ್ತಿಯೆಂಬ ಸುಧೆಯಂ ಸವಿದುರ್ಬುತೆ ಕಂದುಕುಂದನಾ
ೞ್ದರದೆಸೆವಂಗಮುರ್ವಿದ ಲಸತ್ಪುಳಕಾಂಕುರಮುಜ್ಜ್ವಲನ್ಮುಖಾಂ
ಬುರುಹಮರಲ್ದು ಸತ್ತ್ವಮಯಮಾನಸಮೊಪ್ಪಿರೆ ಚಿತ್ಸುಖಾಬ್ಧಿಯೊಳ್
ಕರಮವಗಾಹಮಿರ್ದನವನೀಶ್ವರಪಾದಸರೋಜಷಟ್ಪದಂ ೪೧

ಪಳಿಕುಗೊಡದೊಳಹೊಱಗೆ ಪ
ಜ್ಜಳಿಪಂತಜ್ಯೋತಿಯಂತಿರೊಳಹೊಱಗೆ ಸಮು

ಜ್ವಲಿಪಂತಕ್ಷಿಜ್ಯೋತಿಯ
ಬೆಳಗಿನೊಳೊಡವೆರೆದು ಬೆರಸಿ ಬೆಚ್ಚವೊಲಿರ್ದಂ ೪೨

ನೀನಾನೆಂಬೆರಡಟಿದುದು
ಮಾನಸಸುಂಭೋಧಿಯಾಲಿಕಲ್ಲೋಲಯುತ್ತು ಶಿವಂ
ತಾನಾದನೊ ತಾನೇ ಶಿವ
ನೇನಾದನೊ ಎಂಬ ತೆಱದಿನವನೊಪ್ಪಿರ್ದಂ ೪೩

ಇಂತೆಸೆವ ಸದೃಶಶಿವಧ್ಯಾನಾನುಸಂಧಾನದಿನುತ್ತರೋತ್ತರತಪಃಪ್ರಭಾವ ದಿನಾತಪಸ್ವಿ ನಿಷ್ಕಂಪನಿರ್ವಿಕಾರತೆಯಿಂ ರಂಜಿಸಿರ್ಪನ್ನೆಗಂ,

ಕ್ಷಿತಿಯೆಲ್ಲಂ ಕಾಯ್ದು ದಾಶಾಧಿಪರಗಿದರಮರ್ತ್ಯರ್ಕಳಲ್ಲಾಡಿದರ್ ಪ
ರ್ವತವೃಂದಂ ಕಾಯ್ಪುಗೊಂಡತ್ತತುಳಜಳಧಿ ಮೆಯ್ಗುಂದಿದತ್ತರ್ಕಚಂದ್ರೋ
ನ್ನತತೇಜಃಸ್ಫೂರ್ತಿಯೆತ್ತಂ ಮಸುಳ್ದುದಮಮ ತತ್ತಾಪಸಸ್ಯಾತ್ತಪ್ರವೃದ್ಧೋ
ಗ್ರತಪೋಗ್ನಿಜ್ವಾಲೆಯಿಂದಂ ನೆಗೆದುದೊಗೆವತದ್ಧೂಮದಿಂಮೇಘವೃಂದಂ ೪೪

ಆಗಳ್ ತಪೋವನದ ತಪೋಧನರ್ಗೆ,

ಧೃತಿಯುಳ್ಳಾಡಿದುದೇಟಿಗ್ಗುಂದಿದುದಧೀಶಧ್ಯಾನಮುದ್ವೃತ್ತಪಃ
ಸ್ಥಿತಿಗೆಂಟಾದುದು ಶಾಂತಿ ಸೋದುದು ಜಪಾನುಷ್ಠಾನಮಿಲ್ಲಾಯ್ತು ಸದ್
ವ್ರತಮುಂ ಸೀಕರಿವೋದುದಟ್ಟಿದುದು ವೇದಾಂತೋದಿತಜ್ಞಾನಮು
ನ್ನತಿಗೆಟ್ಟಿರ್ದುದು ಸದ್ವಿವೇಕಮಟಿದತ್ತಾನಂದದೊಂದೆಟ್ಟಿರಂ ೪೫

ವಿಪರೀತಮುವನ ಚರಿತಂ
ತಪಮಧಿಕಂ ತದ್ವಿಚಾರದಿಂದೆಮಗೇಂ ವಂ
ದಪುದವನತ್ತಣಿನೊದವಿ
ರ್ದಪಟಳಮಂ ಕಳೆದು ಕಾಯ್ವುದೆಮ್ಮನುಮೇಶಾ ೪೬

ಆ ಗಿರಿತಟದಿಂದವನಂ
ಪೋಗಿಸಿ ತದ್ವನನಿವಾಸಮಂ ಕರುಣಿಪುದಂ

ತಾಗದೊಡೆನುಗೀವುದು ನೀ
ಡಾಗದೆ ಪೆಱತೊಂದನುಚಿತನಗನಂದನನುಮಂ ೪೭

ಪ್ರಣಯಮಣಮಿಲ್ಲದೊಡಮಾ
ಗುಣಿಯ ಗುಣಂಗಳನೆ ಮಱೆಸದುಸಿರ್ದಂ ಮುನಿಪಾ
ಗ್ರಣಿ ಪಗೆಯೊಳಾದೊಡಂ ಗುಣ
ಗಣಮಿರೆ ತಾಂ ಗ್ರಹಿಸಿ ಪೊಗೞದಿರ್ಪನೆ ಸುಜನಂ ೪೮

ಎಂದಿಂತು ಬಿನ್ನಪಂಗೆಯ್ದ ಮುನಿವರನುಕ್ತಿಯಂ ಕೇಳ್ದು ಪನ್ನಗಧರಂ
ಮುಗುಳ್ನಗೆನಕ್ಕು,

ತಳತಳನೆ ತೊಳಪ ರದನದ
ಬೆಳಗಂ ತತ್ಸ್ಥಿತಕೃಪಾಸುಧಾಂಭೋನಿಧಿಯ
ಗ್ಗಳಿಸಿ ತೆರೆಮಸಗಿದಂತಿರೆ
ಜಳರುಹರಿಪುಮೌಳಿ ತಾಪಸಂಗಿಂತೆಂದಂ ೪೯

ಆ ತಪೋಧನನಾವನೆಂಬಭಿಶಂಕೆಯೇಕೆ ಜಗತ್ತ್ರಯ
ಖ್ಯಾತನರ್ಜುನನಿಂದ್ರಸೂನು ಮುಕುಂದದೇವರನುಗ್ರಹಾ
ರ್ಯಾತುಳಂ ಭವದೀಯಭಾಗ್ಯಮನೇನುಮಂ ವಲಮರ್ಥಿಸಂ
ಭೀತಿ ಬೇಡವನತ್ತಣಿಂ ನಿಮಗಂತವಂ ತಪಮಿರ್ದೊಡಂ ೫೦

ಪಡೆ ನೀಂ ಪಾಶುಪತಾಸ್ತ್ರಮಂ ಗಿರಿಶನಿಂ ಪೋಗಿಂದ್ರಕೀಲಕ್ಕೆ ಪೆಂ
ಪಡರ್ದುದ್ಯತ್ತಪಮಾಂಪುದೆಂದು ಬೆಸನಿತ್ತಂ ವ್ಯಾಸನೆಯ್ತಂದನೀ
ಯೆಡೆಗಾತಂ ಪದೆದಿತ್ತ ಮಂತ್ರಮನದಂ ಕೆಯ್ಕೊಂಡು ಮದ್ಭಕ್ತಿ ಸಂ
ಗಡಮಾಗುತ್ತಿರೆ ವೈರಿವರ್ಗವಿಜಯೋಪಾಯಾನ್ವಿತಂ ಫಲ್ಗುನಂ ೫೧

ರಿಪುಜಯಕಾರಣಶರಮಂ
ಪ್ರಪತ್ತಿಯಿಂ ಪಡೆವೆನೆಂದು ಬಯಸುತ್ತೆಮ್ಮಂ

ತಪವಿರ್ದಪನಾ ಮುನಿಯಿ
ತ್ತುಪದೇಶಂಬಿಡಿದು ನಿಶ್ಚಿತಾರ್ಥಂ ಪಾರ್ಥಂ ೫೨

ಆತನಭೀಷ್ಟಮಂ ಸಲಿಸಿ ಪಾಶುಪತಾಸ್ತ್ರಮನಿತ್ತು ತತ್ತಪೋ
ಜಾತಮಹೋಷ್ಣಮಂ ತವಿಸಿ ನಿಮ್ಮ ಮನೋರಥಮಿತ್ತು ರಕ್ಷಿಪೆಂ
ಮಾತಿದು ನನ್ನಿಯೆಂದಭಯಮಿತ್ತವರಂ ಕಳಿಪುತ್ತೆ ಭಕ್ತಸಂ
ಪ್ರೀತಿಯಿನೆಯ್ದಲುಜ್ಜುಗಿಸಿದಂ ಮೃಗಯಾರತನಿಂದುಶೇಖರಂ ೫೩

## ಪಿರಿದಾದುದು ಬೇಂಟೆಯುಬ್ಬರಂ

ದೇವನ ಬೇಂಟೆಯುಜ್ಜುಗದ ಸಬ್ಬವಕಾಱರ ಡಿಂಡಿಮಾರವಂ
ತೀವಿದುದಾ ಮಹಾಕಟಕದೊಳ್ ಸುರದುಂದುಭಿನಿಕ್ವಣಾನ್ವಿತಂ
ಭಾವದೊಳುತ್ಸವಂ ನೆಗೞ್ದುದಲ್ಲಿ ಗಣಾಳಿಗೆ ಸಂಭ್ರಮಂ ಪೊದ
ೞ್ದಾವರಿಸಿರ್ದುದಗ್ಗದಮರರ್ಗದನೂಹಿಸಲಾರ್ಗೆ ಗೋಚರಂ ೧

ಜಡೆಗಳ ಬಂಬಲೇ ತಲೆದಳಿಂ ಫಣಿ ಸುತ್ತಿದ ಬಳ್ಳಿ ತಾಳ್ದ ಬಾನ್
ಗಡಲದು ಪುಷ್ಪಮಾಲೆ ಗಱಿವೂಗಱಿ ತೆಳ್ವೆಱಿ ಬಗ್ಗಸಮ್ಮದೊ
ಳ್ಪುಡೆ ಪೊಸಚಲ್ಲಣಂ ಕರಿಯ ಕುಪ್ಪಸಮಾನೆಯ ಕೃತ್ತಿಯಂಗದೊಳ್
ತೊಡೆದ ವಿಭೂತಿಯುದ್ಗಮಪರಾಗವಿಲೇಪನಮಗ್ನಿಲೋಚನಂ ೨

ಅರೆಯೊಡಲಾದ ಕಾಳಿಯುೞಿದಂಗಮನಾವರಿಸಿರ್ದ ಮಾೞ್ಕೆಯಿಂ
ಕರಮೆಸೆದಿಂದ್ರನೀಲರುಚಿಕಾಂತಕಳೇವರಮೊಪ್ಪೆ ತಾಳ್ದನಾ
ದರದೆ ಕಿರಾತರೂಪಮನುಮಾಧಿಪನಲ್ಲಿ ಘನಸ್ವತಂತ್ರನ
ಚ್ಚಱಿವಡೆದಾಗಮಪ್ರತತಿ ಕೀರ್ತಿಸೆ ಬಣ್ಣಿಸೆ ಸರ್ವನಿರ್ಜರರ್ ೩

ತಳರುಡೆ ಸಂಜೆಗೆಂಪು ಪೊಸಮುತ್ತಿನ ಹಾರಮೆ ತಾರಕಾಳಿ ತ
ಳ್ತೞಿರುಚಿ ಕಾಯಕಾಂತಿ ಕಡುಗತ್ತಲೆ ಮೂಕುತಿಮುತ್ತು ಶುಕ್ರಮಂ
ಡಳಮುಮಡರ್ದೊಪ್ಪೆ ಭಿಲ್ಲಿಯ ವಿಳಾಸಮನಾಳ್ದೆಸೆದಂದು ಸರ್ವಮಂ
ಗಳೆ ನಿಜಕಾಳರಾತ್ರಿವೆಸರಂ ಮಿಗೆ ಸಾರ್ಥಕಮಂ ನೆಗೞ್ಚಿದಳ್ ೪

ತಲೆವಳಸುತ್ತೆ ಕಟ್ಟಿದ ತಳಿರ್ ನವಚಂಪಕಕರ್ಣಪೂರಮು
ಜ್ಜ್ವಲಸಿತಕರ್ಣಿಕಾರಚಿತಕಾಂಚಿ ಮರಂದದ ಬೊಟ್ಟು ಬೆನ್ನ ಮೇ
ಲೊಲೆದೆಸೆವೆಣ್ಣೆಗಂಟು ಪದವಿಲ್ ಮೊನೆಯಂಬು ಲತಾಂತಮಾಲೆ ಮಂ
ಜುಲಗಜದಂತದೊಳ್ಪಳಿ ವಿರಾಜಿಸೆ ಕಣ್ಗೆಸೆದರ್ ಪುಳಿಂದಿಯರ್ ೫

ಮೃಗಮದದಂಗರಾಗಮಸಿತೋತ್ಪಲಮಾಲೆಯ ಚೊಲ್ಲೆಯಂ ಮನಂ
ಬುಗುವ ತಮಾಲಪಲ್ಲವದ ಮೆಲ್ಲುಡೆ ಕಟ್ಟಿದ ಪೀಲಿದಂಡೆ ಚೆ
ಲ್ವಗಲದ ಸಾಂದ್ರಕಜ್ಜಲಲಲಾಮಮಗಾಹಿತರತ್ನಭೂಷಣಂ
ಸೊಗಯಿಸೆ ದೇವಿಯರ್ ಬಳಸಿ ನಿಂದೆಸೆದಿರ್ದರಗೇಂದ್ರಪುತ್ರಿಯಾ ೬

ಅಳಿಕುಲನೀಲಕುಂತಳದ ಕಾಂತಿ ವಪುರ್ಲತೆಯಂ ಮುಸುಂಕಿದಂ
ತಳವಡೆ ಕರ್ಪು ಕಾರ್ಮುಗಿಲ ಮಿಂಚಿನೆ ಕಣ್ಗದಿರುರ್ವಿ ಮಿಂಚೆ ಸಾ
ರ್ದೆಳಸಿ ಪಗಿಲ್ತ ಕೇಕಿಯನೆ ಬಲ್ಮಡಿ ತೋಱೆ ಕಲಾಪಮಾಲೆ ಸಂ
ಗಳಿಸೆ ನಗೇಂದ್ರಜಾತೆಯೊಡನೆಟ್ಟಿರುತಿರ್ದರಮರ್ತ್ಯನಾರಿಯರ್ ೭

ತಳಿರ್ಗಳಮರ್ಕೆವೆತ್ತ ತಲೆಕಟ್ಟು ಲತಾಂತದ ಮಾಲೆ ಬೆನ್ನ ಬ
ತ್ತಳಿಕೆ ಮರಂದದಣ್ಪು ಪಸುರಂಗಿಗೆ ಪೀಲಿಯ ಪಕ್ಕಜಲ್ಲಿ ಗೇ
ಣಳವೆಡೆ ತೊಟ್ಟ ಪೊಂಬುಲಿಯ ಸಮ್ಮದ ಚಲ್ಲಣವೊಪ್ಪೆ ಬಲ್ಸರಲ್
ದಳೆದು ಗಣಾಳಿ ರುದ್ರತತಿ ತಾಳ್ದದನೂನಪುಳಿಂದವೇಷಮಂ ೮

ಸಿಡಿಲಂ ನುರ್ಗುವ ಶೇಷನಂ ತುಡುವ ಕಲ್ಪಾಂತಾಗ್ನಿಯಂ ಕೀಡಿ ಬೊ
ಟ್ಟಿಡುವಾಕಾಶಧರಾತಳಂಗಳನೆ ಕೆಯ್ಯಾದ್ಳಂಗಳಂ ಮಾಟ್ಪಿ ಪೆರ್
ಗಡಲಂ ಪೀರ್ವ ಕುಲಾಚಲಂದಳೆದು ಪೊಯ್ಸೆಂಡಾಡುವಾದಿತ್ಯನಂ
ಮಿಡಿವಾರ್ಪುಳ್ಳ ಗಣಾಧಿನಾಥರೊಡನೇಟ್ಟಿಂದರ್ ಮಹೋತ್ಸಾಹದಿಂ ೯

ಅಂತೇಟ್ಟಿಂದ ಗಣೇಂದ್ರಸಂದೋಹಮಲ್ಲದೆಯುಂ, ಬೇಱೆವೇಱೆ ನಿಜ
ರಮಣಿಯರೊಡನೆ ಕಿರಾತನೂತ್ನವೇಷಾಲಂಕೃತರಾಗೆ

ಮೊೞಗಿದುದಭ್ರದೊಳ್ ದಿವಿಜಭೇರಿಯ ಭೂರಿಗಭೀರರಾವಮು
ಜ್ಜ್ವಳಸಿತಶಂಖನಾದದೊಡನಾನಕಘೋಷಣಮುಣ್ಮಿದತ್ತು ಮಂ
ಗಳರವದಿಂದೆ ಪೊಂಬರಿಯಣಂಗಳೊಳಾರತಿಯೆತ್ತಿ ಪಾಡಿದರ್
ವಿಳಸಿತಭಾರ್ಗವೀ ವಿಧಿವಧೂ ರತಿಮುಖ್ಯನಿಳಿಂಪಕಾಂತೆಯರ್ ೧೦

ಇಡುವಲೆ ಸಿಡಿವಲೆ ಕಿೞುವಲೆ
ನಡೆವಲೆ ಪೆರ್ವಲೆ ತೊಡಂಕುವಲೆ ಕೊಲ್ವಲೆ ಕ
ಕ್ಕಡವಲೆ ನಿಡುವಲೆ ಸಾಲ್ವಲೆ
ಬಿಡುವಲೆಗಳೆನಿಪ್ಪುವೆಸೆದುವಾ ಬೇಂಟೆಗರೊಳ್ ೧೧

ಗೞಗಣೆ ಬೆನ್ನ ಬತ್ತಳಿಕೆ ಮೆಟ್ಟದ ಕೆರ್ಪು ತಮಾಲಪಲ್ಲವಂ
ತಾೞುಗಿದ ಗೊಂಡೆಯಂ ಮಿಸುಪ ಬಿಲ್ ಗುರುಗುಂಜಿಯ ದಂಡೆ ಮಂಡೆಯೊಳ್
ಮಿೞುಗುವ ಪೀಲಿಗಟ್ಟು ಪೊಸನಿಗ್ಗವದೊಳ್ಪಳೆ ಪಚ್ಚೆಗುಪ್ಪಸಂ
ಕಿೞುದಳಿರಾಂತ ಚಲ್ಲಣಮದೇಂ ಬಗೆಗೊಂಡುದೊ ತತ್ಕಿರಾತರಾ ೧೨

ಆಗಳ್ ವಿಪುಳಪುಳಿಂದವೇಷದಗಣಿತಗಣಪ್ರತಾನಮುಮಪರಿಮಿತನಿರ್ಜರವಿತಾನಮುಂ ಬೆನ್ನನೆಟ್ಟಿರೆ ಬಿಂಕದ ಬೆಡಂಗಿನ ಬಿಯದವೆಣ್ಗಳೊಡನೆ ಸಂಭ್ರಮಾಡಂಬರಂಮಿಗೆ ಬಂದ ಗಿರಿತನೂಜೆವೆರಸು ಕಿರಾತಮಹೇಶ್ವರಂ ವಿಪುಳತರೋತ್ಸಾಹದಿನಡಿದಾವರೆಯ ಸೋಂಕಿನಿಂ ಪೊಡವಿವೆಣ್ಣೊಡಲ್ಗೆ ಪುಳಕಾಂಕುರಮನೊಡರ್ಚುತುಂ ನಡೆತಂದಿಂದ್ರಕೀಲಕುತ್ಕೀಲಕಟಕದ ಪೇರಡವಿಯಂ ಪೊಕ್ಕು ನಿಂದು ನಿರೀಕ್ಷಿಪಾಗಳ್,

ಇದು ದವಶಿಖಿಯಿದು ಕಿಂಶುಕ
ಮಿದು ಕಾರ್ಮುಗಿಲಿದು ತಮಾಲಮಿದು ಮದಗಜಮಿಂ
ತಿದು ಗಂಡಶೈಲಮೆಂದೆಂ
ಬುದು ತಿಳಿಪೊಷಶಕ್ಯವೆನಿಪುದಾ ಪೆರ್ಗಾಡೊಳ್ ೧೩

Funding: Tattva Heritage Foundation,Kolkata. Digitization: eGangotri.


ಜ್ಯೋತಿರ್ಲತೆಗಳ ರುಚಿಸಂ·
ಜಾತಂ ಫಣಿಗಣಫಣಾಮಣಿಪ್ರಭೆ ಬಿಡದು
ದ್ಯೋತಿಪುದದಲ್ಲದಾ ಖ
ದ್ಯೋತಶಶಾಂಕಾಂಶು ಪುಗದು ತತ್ಕಾನನದೊಳ್ ೧೪

[ಮತ್ತಮದು] ಪೆಂಪುವೆತ್ತ ಪರಿಮಿತ ಫಲವರ್ಣಪುಷ್ಪಗುಚ್ಛಂಗಳಿನತಿನಿಬಿಡತೆಯನಪ್ಪುಕೆಯ್ದು ರವಿಶಶಿಕರಂಗಳಿಡೆಯಾಟಕ್ಕೆ ತೆಱಪುಗುಡದೆ ತಮದ ತವರ್ಮನೆಯೆನಿಸಿ ವಿಚಿತ್ರತರಖಗಮೃಗಂಗಳ್ಗೆ ವಿಹರಣಸ್ಥಲಮಾಗಿ ಮಹಾಗಹನಮೊಪ್ಪಿರ್ದುದಲ್ಲಿ.

ಪದಗೊಳಿಸುತ್ತೆ ಬಾನರಸದಿಂ ರಸೆಯಂ ಮದಭೃಂಗಮಾಲೆಯಂ
ಕೆದಱುತೆ ಕರ್ಣವಾಳದೆಲರಿಂ ಬಿಸಖಂಡಮಿದೆಂದು ಚಂದ್ರಕಾಂ
ತದೊಳಿದಿರಲ್ಲಿ ಮಾರ್ಪೊಳೆವ ತನ್ನಯ ಕೊಂಬನೊಱಲ್ದು ನೋಡುತುಂ
ಮೃದುಗತಿಯೊಪ್ಪೆ ತೂಗಿ ತೊನೆದಾಡುತೆ ಬಂದುದದೊಂದು ಸಿಂಧುರಂ

ಕೊಳದೊಳೆ ಕಿಬ್ಬು ಪಂಕರುಹಮಂ ಪ್ರತಿಮಾನದೊಳೊಟ್ಟಿಕೊಂಡು ಪಾ
ಯ್ವಳಿಗಳನಗ್ರಪಲ್ಲವದೆ ಸೋವುತೆ ಪಂಕಜರೇಣು ತಳ್ತ ಮಂ
ಜುಳರದನಂ ತೆಱಂಬೊಳೆಯೆ ಶೈವಲವಲ್ಲರಿ ಪತ್ತಿ ವಕ್ಷದೊಳ್
ಮಿಳಿರೆ ಕರೇಣುವಿರ್ದೆಡೆಗದೇಂ ತಳರ್ದತ್ತೋ ಮದಾಂಧಸಿಂಧುರಂ ೧೬

ಇಂತು ಸಂತತಮೊಪ್ಪುವ ಕಾಂತಾರದಂತರಾಳದೊಳ್ ಬಿಯದರ್ ಬೇಂಟೆಯಾಡಲೆಂದು ಸಂಭ್ರಮಂ ಮಿಗೆ ಸರುವಿಡಿದು ಪಣೆಯಿರ್ಪೆಡೆಗೆಯ್ತಂದು ಸಂದು ನೆರೆದು ಪರೆದು,

ನೊರೆ ತುಪ್ಪುಟಿಲ್ ಕೊಳಗು ಕೆಸಱ್
ನೊರಜುಗಳುಗುರಡರ್ದ ಸೊವಡು ಪಜ್ಜೆಗಳಂ ಪಾ
ಯ್ದಿರದಱಿಸಿ ನೋಟ್ಪಿ ಬಿಯದರ್
ತ್ವರಿತದಿನಲ್ಲಲ್ಲಿ ಪರಿದರಾ ಪೆರ್ಗಾಡೊಳ್ ೧೭

ಮದರಸವೊಕ್ಕುದಿಲ್ಲಿ ಕರಿ ಪೋದುದು ಸಿಂಗದ ಬಟ್ಟೆ ನೋಟಿಕ್ಪಿಂಡಿಂ
ತಿದು ಗಜಮೌಕ್ತಿಕಂ ಸಿಡಿದುದಿಲ್ಲಿ ಲುಲಾಯದ ಮಾರ್ಗಮಪ್ಪುದಾ
ಸ್ಯದ ನೊರೆ ಬಿಟ್ಟುದಿಲ್ಲಿ ಕೆಸಱೆರ್ದಪುದಿಲ್ಲಿ ವರಾಹಮೆಯ್ದಿದ
ಶ್ರಿದಿರೊಳೆ ಪುಲ್ಲಿಪಾಯ್ದಡೆಯಿದಪ್ಪುದು ಸೂಸಿದುವಾಸ್ಯದೂರ್ವೆಗಳ್ ೧೮

ಎಂದು ಪಲವಜ್ಜೆಯಂ ಪರೀಕ್ಷಿಸಿ,

ಸರಳಿಸುವೇಣದೋಡುವ ವೊಲಂ ಬಗೆಗುಂದುವ ಖಡ್ಗಿ ನಿಲ್ವ ಸೂ
ಕರಸಡಿಗೊಳ್ವ ಪೆರ್ಚುಱಿಯಡಂಗುವ ಪೆರ್ಬುಲಿ ಕಣ್ದೊಟಿಲ್ವ ಬಲ್
ಗರಡಿ ಕಡಂಗಿ ಮೆಯ್ಮುರಿವ ಕೇಸರಿಯಾಲಿಪ ದಂತಿ ಪಾಱೆ ಸಯ್
ವರಿವ ಖಗಾಳಿಯೊಪ್ಪೆ ಪಿರಿದಾದುದು ಬೇಂಟೆಯ ವಾದ್ಯದಬ್ಬರಂ ೧೯

ಮತ್ತಮಾಗಳ್,

ನಡೆ ಸಃರ್ ಮುಂದೆಯ್ದು ಬೆಳ್ಳಾರವು ನೆಬಿಗಿ ನಿಕುಂಜಂಗಳಂ ಸೋದಿಸಂಬಂ
ಬಿಡು ನೀರ್ದಾಣಂಗಳೊಳ್ ನಿಲ್ ಪಸರಿಸು ಬಲೆಯಂ ಪಜ್ಜೆಯಂ ನೋಡು ನೀಂ ಪೇ
ರಡಿಯಂ ಕೆಯ್ಸನ್ನೆಗೆಯ್ ನಿಂದೆಱಗದಿರುಲಿಪಂ ಮಲ್ಲನಾಕರ್ಣಿಸೊಳ್ಪಿಂ
ದಡರುದ್ಯದ್ಭೂಜಮಂ ಮಾರ್ಗಮನೆ ತಡೆವುದೆಂಬಬ್ಬರಂ ಪರ್ಬಿತೆತ್ತಂ ೨೦

ಬಡಿಯುಡುವಂ ತೊಡಂಕದಿಡು ಪೆರ್ಮೊಲನಂ ಬಲೆವೀಸಿ ಪುಲ್ಲೆಯಂ
ಕೆಡೆವು ಲುಲಾಯಮಂ ಶಱೆ ಪೊವಟ್ಟಿಸು ದಂತಿಯನಾರ್ದು ಖಡ್ಗದಿಂ
ಕಡಿ ಪುಲಿಯಂ ಕರುತ್ತಿಱಿ ವರಾಹನನಿಟ್ಟೆಯೊಳುಗ್ರಸಿಂಹಮಂ
ಪೊಡೆ ಬಿಡದಣ್ಮಿ ಕೂರಸಿಯಿನೆಂಬ ರವಂ ಪಿರಿದಾಯ್ತರಣ್ಯದೊಳ್ ೨೧

ನಡುಗುವ ಕಾಲ್ಗಳುಬ್ಬರಿಪ ಕಿಬ್ಬರಿಗಳ್ ಪೊಡೆವಳ್ಳೆ ಬಾಯ್ಗಳಿಂ
ಕಡೆಗುಗುತಿರ್ಪ ದೂರ್ವೆ ಬೆದರ್ದೀಕ್ಷಿಪ ಸೀಳ್ಗಲರ್ಗಣ್ ಪೊದಟ್ಟು ಸುಯ್
ಬಿಡದಿರೆ ಸೀಟ್ಟು ಕೋಡುಲುಗೆ ಬತ್ತಿದ ಬಾಯ್ವೆರಸಲ್ಲಿ ಭೀತಿ ಕೆಯ್
ಗುಡೆ ಕಡುವೇಗದಿಂದೆ ಕೊಣಕಿಟ್ಟುದು ವನ್ಯಮೃಗೀಕದಂಬಕಂ ೨೨

ನೀಡಡಿಗೊಂಡು ನಿಂದು ಡೊಣೆಯಿಂ ಕಣೆಯಂ ತೆಗೆದಾರ್ದುಂ ಬಿಲ್ಗದಂ
ಪೂಡಿ ಪೊಡರ್ಪುವೆತ್ತು ಕಟಕಾಮುಖದಿಂ ಸೆಳೆದುರ್ವಿ ಲಕ್ಷ್ಯಮಂ
ನೋಡಿ ಕಟಾಕ್ಷಮುಂಬುದುದಿಯೊಂದಿರೆ ತೆಳ್ಪಡು ಬಳ್ಕೆ ಗಾಡಿ ಕೆಯ್
ಗೂಡಿರೆ ತೊಟ್ಟನೆಚ್ಚು ಮೃಗವೃಂದಮನಿಕ್ಕಿದರಲ್ಲಿ ಭಿಲ್ಲಿಯರ್ ೭೩

ಪಸರಿಸಿ ಪತ್ತಿ ಧಾತ್ರಿಗೆ ಕುಸುಂಗಿ ವಿಲಂಘಿಸ ಮಾನಮಂ ಪರೀ
ಕ್ಷಿಸಿ ತೆಱೆದಿರ್ದ ಬಾಯ್ ನಿಮಿರ್ದ ಗೋಣೆಮೆಯಿಕ್ಕದ ಪಿಂಗಳಾಕ್ಷಿ ಮುಯ್
ಮಿಸುಕದ ಮೂಗು ಸುರ್ಕಿಗಿವಿ ಭೂಮಿಯೊಳಾಡಿಪ ಬಾಲವೊಪ್ಪೆ ಗ
ರ್ಜಿಸಿ ಮಿಗೆ ಪಾಱಿ ಮೇಲ್ವರಿವ ಬಗ್ಗಮನಿಕ್ಕಿದನುಗ್ರಲುಬ್ಧಕಂ ೭೪

ನೆಲನಂ ಪೊಯ್ದು ಬೆರಂಟ.ಶಗ್ರಪದದಿಂ ಕೆಂಗಣ್ಗಳಿಂ ನೋಡುತುಂ
ಮಲೆಯುತ್ತುಂ ಮದವೇಱಿ ಮಾಮಸಕದಿಂದಂ ಮೋಱೆಯಂ ಬಾಗಿಮೂ
ಗಲರುತ್ತುಂ ಸುಱುಕಿಟ್ಟು ಸೂಸೆ ನೊರೆ ಬಾಯಿಂ ಬಾಲಮೆತ್ತುತ್ತೆ ಕೋ
ಡಲುಗುತ್ತುಂ ಪುಟವೆಟ್ಟು ಪಾಯ್ದುದಿದಿರೊಳ್ ಶೈಲಪ್ರಭಂ ಸೈರಿಭಂ ೭೫

ಅದಿರದಿದಿರಾಂತು ರೊಂಕೆ
ಟ್ಟೊದಱುತ್ತುಂ ಬರ್ಪ ಕಾಡ ಕೋಣನ ಗೋಣಂ
ಮದಯುತನೊರ್ವಂ ತಱಿದಿ
ಕ್ಕಿದನಾರ್ಪಿಂ ನಿಶಿತಖಡ್ಗದಿಂದೆ ಪುಳಿಂದಂ ೭೬

ನಡೆಗಲ್ತಂಜನಶೈಲದಂತೆ ಪಡೆದೇೞ್ತಿಪಾರ್ನೆಯಂ ಕಂಡು ಬಲ್
ಸಿಡಿಲೆಂತಂತಿರೆ ಗರ್ಜಿಸುತ್ತಡರ್ದದಂ ತತ್ಕುಂಭಮಂ ಸೀಳ್ದು ಕಾ
ಯ್ಪಿಡಿದುದ್ಯದ್ದ್ವಿಪವೈರಿಯುರ್ಗಳಸಿರಂ ಬೀೞ್ವಂತಿರೆಚ್ಚಂ ಜವಂ
ಗೆಡದರ್ಧೇಂದುಮುಖಾಸ್ತ್ರದಿಂ ರುಧಿರಮೆತ್ತಂ ಪಾಯ್ವಿನಂ ಧೀವರಂ ೭೭

ಅತಿರೌದ್ರಾಕಾರದಿಂದುತ್ಕಟಿಸಿ ಮುಳಿದು ತಿಂಬಂದದಿಂ ನೋಡಿ ಶೌರ್ಯೋ
ನ್ನತಿಯಿಂ ಮುಂಗಾಲ್ಗಳಂ ಮುನ್ನೆಗೆಪುತುಗುರ್ಗಳಿಂ ಪೊಯ್ದು ಮೇಲ್ವಾ
ಯ್ದುಗರ್ವೋ

ದ್ಧತಗರ್ಜತ್ಸಿಂಹಮಂ ಬೀಟಿನುತ್ತೊಗೆದದಟಂ ಖಡ್ಗದಿಂ ಪೊಯ್ದನತ್ಯ
ದ್ಭುತಸತ್ತ್ವಂ ಧಾತ್ರಿಯೊಳ್ ತಚ್ಛಿರಮುರುಳೆ ಕನಲ್ದೊರ್ವನುದ್ಯತ್ಕಿರಾತಂ

ಇಂತು ಕಾಂತಾರಾಂತರಾಳದೊಳ್ ಪುಳಿಂದನಿಳಿಂಪರ್ ಪಲವೇಂಟೆಯಾಡುತ್ತುಮಿರೆಯಿರೆ,

ವಿಳಸನ್ಮಂದಾರಭೂಜಾತದ ಬಟಿನೆಟಿಲೊಳ್ ಸಿಂದು ಚಂದ್ರಾಶ್ಮಪೀಠ
ಸ್ಥಳದೊಳ್ ಪೂಗೊಂಚಲೊಂದಂ ಪಿಡಿದಡಿಗಡಿಗಾಘ್ರಾಣಿಸುತ್ತೊಲ್ಮೆಯಿಂ
ಚೆಂ
ದಳಿರುದ್ಯತ್ತಾಲವೃಂತಂಬಿಡಿದು ಪಡೆಪಿನಿಂ ಬೀಸೆ ಕಲ್ಯಾಣಿ ತಾಂ ಕಣ್
ಗೊಳಿಸಿರ್ದಂ ನೋಡುತುಂ ಬೇಂಟೆಯ ಪೊಸಪರಿಯಂ ಲೀಲೆಯಿಂ
ಭಾಳನೇತ್ರಂ ೨೯

## ಈತನೊಳಾಂಪ ವಿನೋದಮುಂಟು

ಅತಿಬಳಮೂಕದಾನವನೆನಿಪ್ಪವನೊರ್ವನಖರ್ವಗರ್ವಸಂ
ಯುತನವನೀಧರೇಂದ್ರದ ನಿತಂಬದಿಱುಂಬಿನೊಳಿರ್ದು ನಿರ್ಜರ
ಪ್ರತತಿಯ ಪರ್ಬಿದಬ್ಬರಮನಾಲಿಸಿ ತಿಂದಪೆನೀ ಸುಪರ್ವಸಂ
ತತಿಯನೆನುತ್ತೆ ತಾಳ್ದು ಪೊಱಮಟ್ಟನುದಗ್ರವರಾಹರೂಪಮಂ ೧

ಇದು ಸಿರದಲ್ಲಿ ಕೋಡೊಗೆಯದಂತಕಸೈರಿಭವೋ ಬಳಿಕ್ಕಮಿಂ
ತಿದು ಭರಿಕೆಯ್ಯನಾನದ ಮಹಾಗಜದಾನವನೋ ವಿಚಾರಿಪಂ
ತಿದು ನಡೆಗಲ್ತು ಸಂಚರಿಪ ಮೇಚಕಶೈಲಮೊ ಸಾರ್ದು ನೋೞ್ಪೊಡಿಂ
ತಿದು ಪೃಥುಕಾಯಸೂಕರನೊ ಪೇೞೆನೆ ತೋರಿದುದಾ ವರಾಹಕಂ ೨

ಬಡಬಜ್ವಾಲೆಯ ವಿಸ್ಫುಲಿಂಗತತಿಯೆಂಬಂತಿರ್ಪ ಕಣ್ ಚಕ್ರದಿ
ರ್ಕಡೆಯಂ ಬಾಯೊಳಿಱುಂಕಿದಂತೆ ಪೊಳೆಪಿಂ ಕೊಂಕಿರ್ದ ಕೂರ್ದಾಡೆ ಬಲ್
ಸಿಡಿಲುದ್ಯದ್ದ್ರವಮಾಳ್ದ ಭೀಕರಮುಖಂ ಕಲ್ಪಾಬ್ದಮಂ ಪೋಲ್ವ ಕಾ
ರೊಡಲತ್ಯದ್ಭುತಮಾಗೆ ಬಂದುದು ಮಹಾರೋಷಾಕರಂ ಸೂಕರಂ ೩

ಖರಖುರಘಾತದಿಂ ಪುಡಿಯೇೞೆ ಶಿಲಾತಳಮೊತ್ತಿ ಮೆಟ್ಟೆ ಮೆ
ಯ್ಯೊರಸೆ ಬೃಹತ್ಕುಜಪ್ರತತಿ ನುರ್ಗೆ ವಿಜೃಂಭಣಮಾಳ್ದು ಗರ್ಜಿಸು
ತ್ತುರುತರಪರ್ವತಂ ಪ್ರತಿರವಂಗುಡೆ ಬೆರ್ಚಿಸಿ ತನ್ನಗೇಂದ್ರಕಂ
ದರಮೃಗರಾಜಿಯಂ ಜವದಿನೇಟ್ತುರುತಿರ್ದುದು ಸೊರ್ಕಿದೆಕ್ಕಲಂ ೪

ಆ ಕಟಕದೊಳಿಂತು ಬರ್ಪ ಕಿಟಿಯಂ ಕಿಟ್ಕನೆ ಕಂಡು,

ಎಲೆ ಎಲೆ ಪಂದಿ ಪಂದಿ ಮಿಗೆ ಬಂದುದು ಬಂದುದು ಭಿಲ್ಲರೆಲ್ಲರಂ
ಬಲಿಗೊಳಲೆಂದು ಮೃತ್ಯು ಕಿಟಿರೂಪಮನಾಳ್ದುವೊಲೊತ್ತಿ ಪತ್ತಿ ನಿಲ್
ತೊಲಗದಿರಟ್ಟು ಕುಟ್ಟು ತಿವಿ ಕೊಲ್ ತಱಿ ಗೋಣ್ಮುಱಿ ತುತ್ತುಸೀಳ್ ಪಳಂ
ಜಲಸದೆ ಪೊಯ್ ಕರುತ್ತಿಱಿಯೆನಿಪ್ಪ ರವಂ ಪಿರಿದಾಯ್ತು ಬೇಡರೊಳ್

ಎಂಬು ಸೌರಂಭದಿಂ ಮುಟ್ಟಿ ಮೂದಲಿಸುತ್ತೊಟ್ಟಜೆಯಿಂ ತೊಟ್ಟನಿಟ್ಟಗಳಂ ತಾಳ್ದು ಕಟ್ಟುಬ್ಬಟೆಯಿಂ ಕವಿದ ದಿಟ್ಟಬಿಯದರ ಪರ್ಬಿದಬ್ಬರಮ ಸಾಲಿಸಿಕಸಲ್ಕೆ ಮಿಗೆ ದಾಡೆಯಂ ಮಸೆದಂಡುಗೊಂಡು ತೃಣಮಂ ತುಂಡಿಸಿ ಬಾಲಂ ನಿಮಿರೆ ಕಾಲಂತೂಗಿ ಪಟುತರಶೌರ್ಯದಿಂ ಪುಳಿಂದನಿಳಿಂಪರ್ಗಭಿಮುಖಮಾಗಿ ನಿಂದು,

ನಡುಗೆ ಧರಿತ್ರಿ ದಿಕ್ಕರಿಗಳಳ್ಕೆ ಭಯಂಗೊಳೆ ಸತ್ತ್ವಸಂಕುಳಂ
ಪಡಲಡೆ ಶೈಲಶೃಂಗತತಿ ತುಳ್ಕೆ ಮಹಾಬ್ಧಿ ಕರಾಳಘೋಷದಿಂ
ಘುಡುಘುಡಿಸುತ್ತೆ ದಾಡೆಗಡಿದುರ್ಬೆ ಕಡಂಗುತೆ ಕಾಯ್ಪುವೆತ್ತು ಕಣ್
ಗಡೆ ಕಿಡಿಸೂಸೆ ನೋಡಿದುದು ನಿಂದು ಪುಳಿಂದರನುಗ್ರಸೂಕರಂ ೬

ಟೊಣೆದವರೆಚ್ಚ ಕೂರ್ಗಣೆಗಳಂ ಮಿಗೆ ಮುತ್ತಿದ ಜಾಯಿಲಂಗಳಂ
ಕ್ಷಣದೊಳದಿರ್ಚೆ ತುಂಡಿಸಿ ಕರುತ್ತಱಿವಿಟ್ಟಿಯನಂಡುಗೊಂಡು ಬಿ
ನ್ನಣದೆ ಬಿದಿರ್ಚೆ ನಿರ್ಭರದೆ ಪೆರ್ಬಲೆಯಂ ಪಱಿದಿಕ್ಕಿ ಕೇಣದಿಂ
ಕಣಕಿದ ಧೀವರಾಮರರನೆಕ್ಕಲನುರ್ಬತೆ ಸೀಳ್ದು ದಾರ್ಪಿನಿಂ ೭

ಮತ್ತಂ,

ತಿರುಗುತ್ತೊಂದೆರಡಡಿಯಂ
ಭರದಿಂ ನೋಡುತ್ತೆ ನಿಲುತೆ ಘೊರ್ಮಿಸುತುಂ ಕೊ
ಕ್ಕರಿಸುತಿದಿರಾಂತು ಮಿಸಟಂ
ಬರಿದುದು ಸುರರಿದಿರೊಳರಕೆ ಘೋರವರಾಹಂ ೮

ಮುತ್ತಿದರಮರ್ತ್ಯರ್ಲುಬ್ಧಕ
ರೆತ್ತಂ ಘಡಘಡಯೆನುತ್ತೆ ಕೂರ್ಗಣೆವಟ್ಟೆಯಂ
ಸುತ್ತಿಱಿದು ಕಱೆದರಾರ್ದೊರ್ದ
ರುತ್ತಸಿಯಂ ಜಡಿದು ಝಂಕಿಸುತ್ತಿದಿರಾದರ್ ೯

ಇಱು ಬಱಿಯಂ ಶರಿ ಕೊರಲಂ
ಮುಱಿ ಮೂಳೆಂಗಳನಡಗನುಗಿಯೆನುತ್ತಸವಸದಿಂ
ನೆಱೆ ಸುತ್ತಿದರಿರದೊತ್ತಿದ
ರುಱೆ ಮುತ್ತಿದರಮರಲುಬ್ಧಕರ್ ಪಟುಕಿಟಿಯಂ ೧೦

ಆಗಳವರ ಸಂರಂಭಮಂ ಕಂಡು ರೋಷಾವೇಶಮಂ ಕೆಯ್ಕೊಂಡು ದಾಡೆಗಡಿದು ಮಾರ್ಮಲೆತು ಮಾಮುಸಕಂ ಮಸಗಿ,

ಒದೆದು ಧರಿತ್ರಿಯಂ ನೆಱೆ ಪುಟಂ ನೆಗೆದವ್ವಳಿಸುತ್ತೆ ತುಂಡಮಂ
ಬಿದಿರ್ದು ಕಡಂಗಿ ಗರ್ಜಿಸಿ ಘನಾಘನನಿಸ್ವನದಿಂ ತುಡುಂಕಿ ಪೊ
ಯ್ದುದು ಕುಡುದಾಡೆಯಿಂದಿಱಿದುದೆತ್ತಿದುದಿರ್ಬಗಿಯಾಗೆ ಕಾಯಮೊ
ಟ್ಟೆದುದವರಟ್ಟೆಯಂ ಕೊಱೆದು ತಿಂದುದು ತೇಗಿದುದುಗ್ರಸೂಕರಂ ೧೧

ಎಚ್ಚಂಬುಗಳವು ರೋಮಮು
ನುಚ್ಚಳಿಸಲ್ಕಾಱವಲ್ಲಿ ತೊಡರ್ದಿರೆ ಕೊಡಪು
ತ್ತಚ್ಚರಿಯ ಮುಳ್ಳ ಪಂದಿಪೊ
ಲಚ್ಚಿಗಮಂ ಮಾಡಿ ಮಡಿಪಿದತ್ತದು ಸುರರಂ ೧೨

ಆಗಳೆಚ್ಚಂಬಂ ಬಗೆಗೊಳದೆ, ಕನಲ್ಕೆಯಿಂ ಬಱಿಸಂದು ಬವರಿವರಿದು ತುಱುಗಿ ತುಡುಂಕುವ ಜಾಲಿಲಂಗಳಂ ಲೆಕ್ಕಿಸದೆ, ಮಿಡಿಯಿಂ ಸಿರಂಬರ ಮೆತ್ತಿ ಸೀಳ್ದು ಸದೆವ ಸಮದಸೂಕರನಸಮಸಮರಾಟೋಪಮಂ ಸೈರಿಸಲಾರದೆ ಕಣ್ಗೆಟ್ಟು ಬೆನ್ಗೊಟ್ಟೋಡಿ ಬರ್ಪಮರವ್ಯಾಧಸಂಘದಭಿಷಂಗಮಂ ಸಿಂಗಡೆಬೊಳಂಗನೆವೆರಸು ಬನದೊಳೋರ್ವನೆ ಬಿಸದಿಪ ಕಪರ್ದಿ ಕಂಡು,

ಕರುಣಂ ಪುಟ್ಟೆ, ಜವದಿಂದವರ್ಗಂಜದಿರಿಮೆಂದಭಯಹಸ್ತಮಂ ನೆಗೆಪಿ ಮಡಿದಮರರ್ಗಸುವಿತ್ತು ಸಕ್ಷತಾಂಗರನಕ್ಷತಾಂಗರನಾಕ್ಷಣಂ ನೆಗಟ್ದು, ನೆಗಟ್ತೆವೆತ್ತ ನಿಜವಾಮಕರಕಲಿತಪ್ರಚಂಡಕೋದಂಡಕೋಟಿಯೊಳ್ ಮಂಜುಸಿಂಜನಿಯನಮರ್ಚಿ, ಕೆಯ್ಕೊಂಡು ತನ್ನನಗಲ್ದಲ್ಲಲ್ಲಿ ಸಂಚರಿಪ ಮನ್ನಣೆಯ ಗಣನಿವಹಂ ಕಳಕಳಮಂ ಕೇಳ್ದು ನಡೆತಂದೊಡನೇಟ್ತರೆ, ಮುಂದಣ್ಗೆ ಸಾರ್ದಮರರಂ ಬೆನ್ಗೊಳ್ವ ಸಂವರ್ತಸಮಯಯಮಮಹಿ ಷೋಪಮಾನನಾದ ಭೀಕರಾಕಾರ ಮೂಕಾಸುರನಂ ತೊಟ್ಟನೆ ಕಟ್ಟೆದಿ ರೊಳ್ ಕಂಡು, ಕಾಯ್ಪುಗೊಂಡು ಚಂಡಧನುರ್ಗುಣಮಂ ನೀವಿ ಜೇವೊಡೆ ಯಲೊಡನೆ,

ಪಡುಗಿದುದಿಳೆ ಗಿರಿಶಿಖರಂ
ಕೆಡೆದುದು ಕದಡೆಟ್ದು ಜಡಧಿ ತುಳ್ಕಿದುದುಡುಗಳ್
ಒಡದುಳ್ಕಿದು ವಹಿಪತಿ ಪೆಡೆ
ಯುಡುಗಿದಸಿನಬಿಂಬಮುದಿರ್ದುದಳ್ಕಿದರಹಿತರ್ ೧೩

ಗಣತತಿ ಕಿಟಿಯಂ ಸದೆಯಲ್
ಕಣೆದುಡುತಿರೆ ಪುರ್ಬಿನಿಂದೆ ಜರ್ಬುತೆ ನಿಲಿಸು
ತ್ತಣೆಯ.ರಮಭವಂ ತೆಗೆದಂ
ಡೊಣೆಯಿಂ ಪೊಗರುಗುವ ನಿಶಿತತರಮಾರ್ಗಣಮಂ ೧೪

ಅಂತುಮಾ ಕೂರ್ಗಣೆಯಂ ಮಾಣದೆ ಬಾಣಾಸನದ ತಿರುವಾಯೊಳ್ ಪೂಡಿ ನೀಡಡಿಗೊಂಡಾಕರ್ಣಾಂತಂ ಸೆಳೆದು ಸುರರಂ ಪಿಂಗದೆ ನುಂಗಲೇ ಟ್ತುರ್ಪ ಮಿಟ್ತುವಿನಂತದಿರದಿದಿರ್ಚಿ ಗರ್ಜಿಸುತ್ತುಂ ಬರ್ಪ ಬಲ್ಪಂದಿ ಯನಭೀಕ್ಷಿಸಿ,

ಪಂದಿಯಿದಂದಿನಗ್ಗದ ಗಜಾಸುರನಿಂ ಮದವತ್ತರಕ್ಕುಸಂ
ಕ್ರಂದನವೈರಿಯಿಂ ಬಲದೊಳುಗ್ರತರಾಕೃತಿಯೊಳ್ ಪೊದಟ್ದು ನಿ

ಪ್ಪಂದಪರಾಕ್ರಸ:ಸ್ಥಿತಿಯೊಳಿರ್ಮಡಿ ವೆಗ್ಗಳಮಪ್ಪುದಿಂದಿದಂ
ಕೊಂದಪೆನಾನೆ ವಿಕ್ರಮರಸಂತತಿಗೆಂತಿದು ವಧ್ಯಮಕ್ಕುಮೋ ೧೫

ಎಂದು ಬಗೆದಂತಕಾಂತಕಂ ಪ್ರತಿಜ್ಞಾರೂಢನಾಗಿ,

ಪ್ರಕಟಪಟುರೋಷಬದ್ಧ
ಭ್ರುಕುಟಿ ಕರಾಳಾಸ್ತ್ರದಿಂದೆ ತೆಗೆನೆಱಿದೆಚ್ಚಂ
ಪ್ರಕುಟಿಲದಂಷ್ಟ್ರಾಭೀಷಣ
ವಿಕಟಾಂಗನನಾ ವರಾಹನಂ ಪುರಮಥನಂ ೧೬

ಎಚ್ಚೊಡಿಳಿಯದಿರೆ ಶರವಿರ
ದುಚ್ಚಳಿಸಿದುದೊಡಲನದಱ ಕೆನ್ನೀರ್ ಭರದಿಂ
ಬೆಚ್ಚನೆ ಪಾಯ್ತುರೆ ಕಣ್ಣುರೆ
ಮುಚ್ಚುತ್ತುಂ ಮೂರ್ಛೆವೋದುದಲ್ಲಿ ವರಾಹಂ ೧೭

ಅಂತು ಹಮ್ಮದಂಬೋಗಿ ವಜ್ರವಜ್ರನಿರ್ಘಾತದಿನುರುಳ್ದ ನೀಲಾಚಲ ದಂತೆ ಪೊಡವಿಯೊಳ್ ಕೆಡೆದಿನಿಸಾನುಂ ಬೇಗದಿನೆಟ್ಟಿತ್ತು ಮಾದಮುಡಿಗಿ ಬೇರ್ವರಿವ ಭೀತಿಯಿಂ ಬೆಂಗೊಟ್ಟು ಪರಿದು,

ಮಡು ಗಿಡು ಸರುದರಿ ಪಳ್ಳಂ
ಸಿಡುಂಬು ಮೆಳೆ ಬಳ್ಳಿ ಪುಲ್ ಪೊದಱ್ ಬೆಟ್ಟುಗಳೆ
ಟ್ಟೆಡೆ ಕುತ್ತುಱು ನಾನಲ್ಗಳೊ
ಳೆಡೆವಿಡದೋಡಿತ್ತು ಪಂದಿ ಜವದಿಂದಾಗಳ್ ೧೮

ಬೆಂಬಱವಿಡಿದಟ್ಟುತ್ತುಂ
ತಾಂ ಬರೆವರೆ ಬಿಡದಧಿಜ್ಯಧನು ಶಬರೇಶಂ
ಮುಂಬರಿದರ್ಜುನನಿರ್ದ ಬ
ನಂಬೊಕ್ಕುದು ಪಂದಿ ಸುಟಾದುದಾತನ ಬಱಯೊಳ್ ೧೯

ಆಗಳ್ ಬಟ್ಟವಿಡಿದು ಬಳಸಿ ಕವಿದು ಕುಬ್ಬಬೆಂದು ಬೊಬ್ಬಿಱಿವ ಸುರಕಿರಾತರಬ್ಬರಮಂ ಕೇಳ್ದು ದೆಸ್ತ್ರಣಡೆಂದು ಯೋಗಿ ಯೋಗಮನುಪಶಮಿಸಿ, ಕಣ್ದೆಱೆದು ಮುಂದಿರ್ದ ಭೀಕರಾಕೃತಿವೆತ್ತ ಮಹಾವರಾಹನಂ ನೋಡಿ, ಬಸದ ತಪಸ್ವಿಗಳ್ಗೆ ಪಹತಿಗೆಯ್ವುದಿದಂ ತವಿಪುದೆನಗೆ ಕರ್ತವ್ಯಮಕ್ಕುಮೆಂದು ನಿಜಕ್ಷಾತ್ರಧರ್ಮಮಂ ಬಗೆದು, ಮೂಡಿಗೆಯಿಂ ತೋಡಿಲ್ಲದ ಚಂಡಕಾಂಡಮನುಗಿದು, ಗಾಂಡೀವಿ ಗಾಂಡೀವದಿರ್ದೆಸೆಯ ಕೊಪ್ಪನಾರಯ್ದು ಪೆದೆಯುಂ ತೊಡರ್ಚಿ ಜೇವೊಡೆದು ಪೂಡಿ ನೀಡಡಿಗೊಂಡು ತೆಗೆನೆಱೆನಿಂದು.

ಕೆಡೆ ಕೆಡೆಯೆಂದಾರ್ದೆಚ್ಚಂ
ಘುಡುಘುಡಿಪ ಮಹಾವರಾಹನಂ ಕೂರ್ಗಣೆಯಿಂ
ಕಡುಗಲಿ ಪಾರ್ಥಂ ನೆಱನಂ
ನಡೆಗೋಣಡಿಗೊಂಡು ಪಂದಿ ಕೆಡೆದತ್ತಾಗಳ್ ೨೦

ಜವದಿನಲ್ಲಿಗೆ ಬಂದು ಶಂಕರನೆಂದನೀ ಕಿಟಿಯೆಮ್ಮದಾಂ
ತವಿಸಿದೆಂ ತೆಗೆಯೆಂದು ಭೂತಗಣಕ್ಕೆ ಪೇಳ್ವುದುಮಾಲಿಸು
ತ್ತವಿಕಲಂ ಕೆಡೆವತ್ತಿದೆನ್ನಯ ಬಾಣದಿಂ ಕಡೆಸಾರ್ ಬಿಡೆಂ
ದವನನೀಶ್ವರನೆಂದು ಬಲ್ಲನೆ ಪಾರ್ಥನೊತ್ತಿ ಕೆರಳ್ಚಿದಂ ೨೧

ಎಲೆ ಶಬರ ಕಾಡ ಬಡನರಿ
ವೊಲ ಪುಲ್ಲೆಗಳಲ್ಲಿ ನಿನ್ನ ಸಾಹಸಮುಂ ದೋ
ರ್ಬಲಮುಂ ಮೆಱೆಗುವುದಲ್ಲದೆ
ಚಲದಂಕನೊಳೆನ್ನೊಳೆಂತುಮೇಂ ಮೆಱೆದಪುದೇ ೨೨

ಕರಿ ಕೇಸರಿಯುಂ ಕೆಣಕಿದ
ಪರಿಯಂ ಪರುಟವಿಸದಿರ್ ಮದಾಂಧತೆಯಿಂದಾಂ
ತರಿಬಲಬಲಾಹಕಪ್ರ
ಸ್ಫುರಿತಮಹಾನಿಲನೊಳತುಳಬಳಗಾಂಡಿವಿಯೊಳ್ ೨೩

ಎನೆ ನಸುನಕ್ಕು ಮಾರರಿಪುವಾತನ ಧೈರ್ಯಮನಾತನೇಟಿಗೆವೆ
ತ್ತನುಗತಶೌರ್ಯಮಂ ಬಟಿಯೊಳಿರ್ಪಗಜಾತೆಗೆ ಸೂಚಿಸುತ್ತೆ ಪು
ರ್ಬಿನ ಕೊನೆಸನ್ನೆಯಿಂ ಗೊರವ ನಿನ್ನಯ ಶೌರ್ಯಮದಿರ್ಕೆ ಖಡ್ಗಮಾ
ಧನುಶರಮೆತ್ತ ನಿನ್ನ ತಪಮೆತ್ತ ವಿಚಿತ್ರಮಿದಲ್ತೆ ಧಾತ್ರಿಯೊಳ್ ೨೪

ಎಂದೇಳಿದಂಗೆಯ್ದು ನುಡಿದ ಕಪರ್ದಿಯ ಕಟೂಕ್ತಿಯಂ ಕೇಳ್ದು,

ವಿಪಿನಚರ ನಿನಗೆ ತಕ್ಕುದು
ಚಪಲಮೃಗವ್ರಜದ ಬೇಂಟೆಯುಜ್ಜುಗಮೆವಿಮ್ಮಾ
ತಪದ ವಿಚಾರಂ ತಕ್ಕುದೆ
ವಿಪರೀತಂ ನಿನ್ನ ನುಡಿಯುನೊಲ್ವರೆ ಬಲ್ಲರ್ ೨೫

ಎಂದವನುಕ್ತಿಯಂ ಗಿರಿಶನಾಲಿಸಿ ತಾಪಸ ಲೇಸನಾಡಿದಯ್
ಕುಂದದೆ ಬೇಂಟೆಯುಜ್ಜುಗಮಿದೆಮ್ಮಯ ಕಜ್ಜಮಿದಪ್ಪುದಪ್ಪುದಾ
ವಂದದಿನಿಂತು ನಿನ್ನವೊಲದಾವನೊ ಶಾಂತಿಸಮಗ್ರನುಗ್ರಶೌ
ರ್ಯಂ ದಿಟಮಸ್ತ್ರಶಸ್ತ್ರಧರನಾದ ತಪಸ್ವಿ ಧರಾತಳಾಗ್ರದೊಳ್ ೨೬

ಎಂದು ನುಡಿಯಲೊಡನೆ,

ಕಟಕಿಯಿದೇಂ ಪುಳಿಂದಂ ಬಿಡು ನಿನ್ನ ದುರುಕ್ತಿಯನೆಮ್ಮವೃತ್ತಿಯಂ
ಪಟುತಪಮಾಂತ ತಾಪಸರೆ ಬಲ್ಲರುದಾರಜಟಾಮೃಗಾಜಿನ
ಸ್ಫುಟಭಸಿತಂಗಳಂ ಶರಶರಾಸನಖಡ್ಗಮನಾಂತು ತಾಪಸೋ
ತ್ಕಟಮೃಡನಿರ್ಪನಾ ಮೃಡನ ಶಿಷ್ಯತೆಯಾಂತೆನಗೇನಿದೊಪ್ಪದೇ ೨೭

ನೀನೆನ್ನೊಳಾಹವಕ್ಕೆ ಸ
ಮಾನನೆ ತೊಲಗಾಂಪ ಧೀರನಂ ಬರಿಸೀಗಳ್
ಕಾನನಚರ ಸಮರದೊಳಭಿ
ಮಾನಮನುಟಿಯೆನೆ ಮಹೇಶ್ವರಂ ಮುಗುಳ್ನಗೆಯಿಂದಂ ೨೮

Funding: Tattva Heritage Foundation,Kolkata. Digitization: eGangotri.



ಏನಾದೊಡೇನೊ ನಿನ್ನ ತ
ಪೋನೀತಿಯುದಂತದಿರ್ಕೆ ನಿನ್ನ ಧನುರ್ವಿ
ದ್ಯಾನಿಪುಣತೆಯೆಂತೆಂತನು
ಮಾನವುದೇಂ ತೋರ್ಪುದೆನ್ನೊಳಡಗಿನಿಸಂವೆಂ ೨೯

ಎಂದು ಧೂರ್ಜಟಿ ಗಭೀರಧ್ವನಿಯಿಂ ಗಜರಿ ಗರ್ಜಿಸಿ ನುಡಿಯೆ,

ಒಳಸೋರ್ದುದು ಶಾಂತಿರಸಂ
ಮೊಳೆತುದು ಕೋಪಾಗ್ನಿ ಪೊಗೆದ್ರುದುಸಿರೊಳ್ ನಿಡುಗ
ಣ್ಗಳ ಕಡೆಯೊಳ್ ಕಿಡಿಗೆದರ್ದುದು
ಬಟ್ಟಿಕಲರ್ದುದು ಮೊಗದೊಳಚಲರಿಪುನಂದನನಾ ೩೦

ಪಟುಕೋಪಾಟೋಪಬದ್ಧಭ್ರುಕುಟಿ ವಿಚಳಿತಶ್ಮಶ್ರು ಘರ್ಮಾಂಬುಭಾಸ್ವ
ನ್ನಿಟಲಂ ಶೋಣಾಕ್ಷಿಕೋಣಂ ಪೆದೆಯನೆಟ್ಟಿದು ಗಾಂಡೀವಮೊಳ್ ತೊಟ್ಟು
ರೌದ್ರೋ
ತ್ಕಟವೃತ್ತಂ ಜ್ಯಾರವಂಗೆಯ್ದಡಸಿ ಪಿಡಿದು ನಿಂದಾರ್ದು ಗ್ರಾತಾಸ್ತ್ರಮಂ ಸಂ
ಘಟಿಸುತುಂ ಮಾಣದೆಚ್ಚಂ ಕಪಟಶಬರನಂ ಕೊಳ್ಳೆನುತ್ತಣ್ಮಿ ಪಾರ್ಥಂ ೩೧

ಗಿರಿಯುಗ್ರದೊಳುಱ್ಚಿ ಕಱ್ಚಿವಂ
ಶರವೃಷ್ಟಿಯನಾತ್ಮಜನಕನಿಂದ್ರನೆನುತ್ತುಂ
ಪುರುಡಿಸಿ ಶರವೃಷ್ಟಿಯನಾ
ಗಿರಿಶಾಗ್ರದೊಳಯ್ದಿ ಕಱ್ಚಿದನರ್ಜುನನದಟಿಂ ೩೨

ಧರೆಯೆತ್ತಾಗಸಮೆತ್ತ ತಳ್ತ ದೆಸೆಯೆತ್ತೆಂಬಂತೆ ಮತ್ತಂ ಧನು
ರ್ಧರಪಾರ್ಥಂ ಬಿಡದೆಚ್ಚ ಮಾರ್ಗಣಕದಂಬಂ ಧಾರೆಯಿಂ ಪೊಣ್ಮಿದ
ಳ್ಪುರಿ ವಿದ್ಯುದ್ದ್ಯುತಿವಿಸ್ಫುಲಿಂಗತತಿ ಸುತ್ತಂ ಸೂಸೆ ಪಾಯ್ತಂದು ನಿ
ರ್ಭರದಿಂ ತೀವಿದುದೆಂಬಿನಂಬುಧಿಯುಳಂಬಂ ಮುತ್ತಿದತ್ತೆಂಬಿನಂ ೩೩

ಮಂಜಿನ ಪುಂಜಮೊತ್ತರಿಸಿ ಮುತ್ತಿ ಮುಸುಂಕೆ ಭಯಾರ್ತಿಗೊಳ್ಳನೇ
ಕಂಜಸಖಂ ಪತಂಗತತಿ ಪಾಯ್ದೊಡೆ ಬೆರ್ಚುಗುಮೇ ದವಾಗ್ನಿ ವಾ

ತಂ ಜವದಿಂ ಪಳಂಚೆ ಗಿರಿ ಕಂಪನವಾಂಪುದೆ ಪಾಂಡುಪುತ್ರನಾ
ತಂ ಜಡಿದೊತ್ತೆ ಜಾಱೆ ಪೆಱಸಾರ್ವನೆ ಧೀರಧನಂಜಯಾಂಬಕಂ ೩೪

ಆಗಳ್

ಮುಳಿದು ಗಜಾಸ್ಯನಬ್ಬರಿಸಿದಂ ಕೆರಳ್ದಂ ಗುಹನಲ್ಲಿ ರೋಷಮು
ಜ್ಜ್ವಳಿಸಿ ಗಣಾಳಿ ಗರ್ಜಿಸಿದುದಾ ನರನೇಟ್ಗೆ ಚಿತ್ರವಿಂತಿದೇಂ
ಕಳಕಳಮೆನ್ನ ಭಕ್ತನಿವನೀತನೊಳಾಂಪ ವಿನೋದಮುಂಟು ನಿ
ಶ್ಚಳತೆಯೊಳಿರ್ಪುದೆಂದವರ್ಗೆ ನೇಮಿಸಿದಂ ಕರುಣಾಬ್ಧಿ ಶಂಕರಂ ೩೫

## ೫. ರಿಪುಜಯಮನಿತ್ತು ಪೊರೆ ಪುರಮಥನಾ

ಆನಂತರಮಾ ಶಬರಶಂಕರಂ ಪ್ರಚಂಡಧನುರ್ದಂಡಮಂ ಕೆಯ್ಕೊಂಡು ತಿರುವೊಯ್ದು ಜೇವೊಡೆದ. ಬಾಣಮಂ ಪೂಡಿ ತೆಗೆನೆಱೆದೆಚ್ಚಾಗಳ್,

ನರನೆಚ್ಚ ಕಣೆಗಳಂ ಕ
ತ್ತರಿಸಿದುವವನೊಡಲನಂಟದಿಳೆಗೞಗಿದುವೀ
ಶ್ವರನಾಣತಿಯಿಂದಾತನ
ಪೊರೆಯೊಳ್ ಪುರಮಥನನೆಚ್ಚ ಪೊಸಕೂರ್ಗಣೆಗಳ್ ೧

ಶರವೃಂದಂ ಮಾಣದೆಲ್ಲಂ ಕಡಿವಡೆದಿಳೆಯೊಳ್ ಬೀೞೆ ಕರ್ಣಾರಿ ಕೋಪಾ
ತುರಚಿತ್ತಂ ಮತ್ತಮೆಚ್ಚಂ ಕಿವಿವರೆಗುಗಿದುದ್ದಂಡಕಾಂಡಂಗಳಂ ಶಂ
ಕರನಾ ಬಾಣಂಗಳಂ ಖಂಡಿಸಿ ಮಗುೞ್ದು ನಿಜಾಸ್ತ್ರಂಗಳಿಂದೆಚ್ಚನಾಗಳ್
ಬೆರಲೆತ್ತುತ್ತೆಯ್ದೆ ಕೊಂಡಾಡಿದನವನ ಮಹಾಶೌರ್ಯಮಂ ಪಾಂಡುಪುತ್ರಂ

ಎಲೆ ಶಬರ ನಿನ್ನ ಪೃಥುಭುಜ
ಬಲವೊಳ್ಳಿತ್ತಸುಗೆ ಪೊಸತು ಬಿಲ್ಲಾಳ್ತನದೊಳ್
ಕಲಿ ನೀನಲ್ಲದೆ ಪೆಱರಾರ್
ಚಲದಿಂ ಸಮನೆನಿಸಿ ಕಾದಿದಯ್ ಬಿಡದೆನ್ನೊಳ್ ೨

ಅಱರೆ ಭವದೀಯಸಾಹಸ
ದಿರವತಿಶಯಮೆಂದು ಪೊಗೞ್ದು ತೊಟ್ಟೆಚ್ಚಂ ಬ
ಳ್ಳಿಂ ಸೂಸುವ ಧಾರೆಯ ಕಿಡಿ
ಸುರಿವ ನಿಶಾತಾಸ್ತ್ರಬೃಂದಮಂ ಕಲಿಪಾರ್ಥಂ ೩

ಶಿವನಿಂ ದಿವ್ಯತರಾಸ್ತ್ರಮಂ ಪಡೆಯಲೆಟ್ಟಿಂದಂದು ಪಾರ್ಥಂ ಮಹೋ
ತ್ಸವದಿಂದಂ ತನಗುಳ್ಳ ಸರ್ವಶರಮಂ ದೇವೇಶ ನೋಡೆಂದು ತೋ
ರ್ಪವೊಲೆಚ್ಚಂ ಕಡಿಬಾ ಕಳಂಬಮನಿತಂ ನಿನ್ನಿಷ್ಟಮಾದಸ್ತ್ರಮಂ
ತವೆ ನೋಡೆಂದವನಲ್ಲಿ ತೋಱುವವೊಲಾತಂಗೆಚ್ಚನುಗ್ರಾಂಬಕಂ ೫

ಅಂತೆಚ್ಚ ಪುಳಿಂದಪುರಾಂತಕನ ಬಿಲ್ಬಿನ್ನಣಕ್ಕೆ ಬೆರಗುವಟ್ಟು,

ನರಸುರದಾನವಾದಿಗಳೊಳಿನ್ನ ಶರಾಹತಿಗೊಡ್ಡಿ ನಿಲ್ಪರಿ
ಲ್ಲರಿದರಿದಾರ್ಪುಗುಂದದಿದಿರೊಳ್ ನೆಱೆ ನಿಂದೆ ಕಿರಾತರಲ್ಲಿ ನೀ
ನುರುತರಸಾಹಸಾಂಕನೆನಿಪಯ್ ನಿನಗಾರ್ ಸರಿವರ್ಪರಳ್ಕದೋ
ಸರಿಸದೆ ನಿಲ್ಪುದಿನ್ನುಮೆನುತಂ ಪೊಗೞ್ದಾತನನೊಲ್ದು ಫಲ್ಗುನಂ ೬

ಎನಿತಂ ತಾನೆಚ್ಚನಸ್ತ್ರಪ್ರಕರಮನಭಿಮಂತ್ರಾನ್ವಿತಂಗೆಯ್ದು ಕೂರ್ಪಿಂ
ದನಿತಂ ಕಾಲಾಂತಕಂ ನುಂಗಿದನಸವಸದಿಂದಂತದಂ ಕಂಡುಮಾಶ
ಕ್ತಿನಿಯುಕ್ತಂ ವ್ಯಾಧನಲ್ಲಾವನೋ ತಿಳಿದಪೆನೆಂಬೀ ವಿಚಾರಕ್ಕೆ ಪಕ್ಕಾ
ದನೆ ಪಾರ್ಥಂ ಕ್ಷಾತ್ರದುಸ್ಸ್ವಾಮಸಮಡಸಿದವಂಗಕ್ಕುಮೇ ಸದ್ವಿವೇಕಂ ೭

ಸವೆದುದು ನಿಷಂಗಶರತತಿ
ಸವೆಯದು ಕೋಪಾಗ್ನಿ ತಿಳಿವು ಮಸುಳ್ದುದು ಸಮರೋ
ತ್ಸವಮತಿ ಸಲೆ ಕಳೆಯೇಱಿದು
ದವಂಗೆ ಪಶುಪತಿಯ ಮಾಯೆಯಂ ಮೀರುವರಾರ್ ೮

ಶಂಕರನಂಘ್ರಿಪಂಕಜದ ಸೇವೆಗೆ ಕಂಟಕನಾದನೇ ಪುಳಿಂ
ದಂ ಕರಮಾತನುರ್ಕನುಗಿವೆಂ ಬಿಡೆನೆಂದು ಜಯೋದ್ಯಮಕ್ಕೆ ನಿಃ
ಶಂಕತೆವೆತ್ತು ನಿರ್ಭರದೆ ಗರ್ಜಿಸಿ ಮುಂಬರಿದೆತ್ತಿ ಚಾಪದಿಂ
ದಂ ಕಲಿಪಾರ್ಥನಪ್ಪಳಿಸಿದಂ ಪಟು ಪೊರ್ದದ ಚಂದ್ರಮೌಳಿಯಂ ೯

ದಂಡೆಗೊಳುತ್ತದಂ ಪೊಳೆದು ಚಿಮ್ಮಿದನೀಶ್ವರನಲ್ಲಿ ಮೇಣದಂ
ಕಂಡು ಕನಲ್ಕೆಯಿಂ ಮಸಗಲ್ಟು ಬಳ್ಕದನೀ ಹತಿಗೆಂದು ಚಂಡಕೋ

ದಂಡಮನೆತ್ತಿ ಪೊಯ್ದನವನೀಶನ ಪೇರುರಮಂ ಕಪರ್ದಿ ಮುಂ
ಕೊಂಡು ಮೃದುಸ್ಮಿತಂ ಮಿಸುಗೆ ತದ್ಧನುವಂ ಸೆಳೆದಂ ಕರಾಗ್ರದಿಂ ೧೦

ಅಂತುಮಾ ಗಾಂಡೀವಕೋದಂಡಮನುದ್ದಂಡಚಂಡಿಕಾರಮಣಂ ಸೆಳೆ
ದುಕೊಳ್ವದುಮತಿರೋಷಕಷಾಯಿತಕಟಾಕ್ಷನಾಗಿ,

ತಿಳಿವಣಮಿಲ್ಲದೆತ್ತರದ ತಾಮಸಪಂಕದೊಳಾಟ್ಟಿಡಾಯುಧಂ
ದಳೆದೊಱೆಯಿಂದೆ ಕಿಟ್ಟು ಜಡಿದಾರ್ದು ಪಳಂಚಿ ಕಿರಾತ ಬೀಟಿನು
ತ್ತೊಳಱಿ ಕಡಂಗಿ ಪೊಯ್ದನಭವಾಂಗಮನರ್ಜುನನಾ ಪುರಾರಿ ಕೆಯ್
ಚಳಕದಿನೀಟ್ಟಿಕೊಂಡನದನಾಗಳೆ ಕೆಯ್ ಬಱಿದಾಯ್ತು ಪಾರ್ಥನಾ ೧೧

ಶರತತಿಯೆಲ್ಲಂ ಬಯಲಾ
ಯ್ತುರುಧನುವುಂ ಪೋಯ್ತುಡಾಯುಧಂ ಜಗುಟ್ಟಿದು ಕೋ
ಡಿರದುದಿರ್ದಿಭದವೊಲಿರ್ದಂ
ನರಸೀಶ್ವರನೊಡನೆ ಸದರಮಪ್ಪುದೆ ಸಮರಂ ೧೨

ಶರಚಾಪಾಯುಧಮೆಲ್ಲಮುಂ ಜಗುಟಿದೊಡೇಂ ಬೆನ್ನಿತ್ತನೇ ಸಾಧ್ವಸಾಂ
ಕುರಮಂ ತಾಳ್ದನೆ ಪಾರ್ಥನಂದಮುಮ ಶೌರ್ಯೋದ್ರೇಕದಿಂದುರ್ಬಿ ಪೆರ್
ವರಗೊಂಬಂ ಮುಱಿದಿಟ್ಟನಾತ್ಮಕರದಿಂ ಕಿಟ್ಟೆತ್ತಿ ಕಲ್ಗುಂಡ ಬಲ್
ಸರಿಯುಂ ಸೂಡಿದನಂತದಂ ಕಡಿದನೊಂದಂಬಿಂದೆ ಮೃತ್ಯುಂಜಯಂ ೧೩

ಅಂತು ಕಡಿದು,

ಎಲೆ ಗೊರವ ಚಾಪಬಾಣಾ
ವಲಿಯುಂ ಖಡ್ಗಮುಮನಕಟ ನೀಗಿದೆ ನಿನ್ನೀ
ಚಲಮುಂ ಬಲಮುಮನಿನ್ನೊಂ
ದಲಗುಳ್ಳೊಡೆ ತಂದು ತಾಳ್ದುವೆಱೆ ಬಟೀಕೆನ್ನೊಳ್ ೧೪

ಇಲ್ಲದೊಡಿಲ್ಲೆನ್ನಿತ್ತಪೆ
ನಿಲ್ಲಿಯೆ ನಿಂತಾಯುಧಂಗಳಂ ಪಿಡಿ ರಣದೊಳ್

ಗೆಲ್ಲಲ್ಕೆ ಸಾರ್ದ ಕಲಿ ನೀ
ನೆಲ್ಲಂದದಿನೆನ್ನೊಳಾಂತು ಗೆಲ್ವುದೆ ಕಜ್ಜಂ ೧೫

ಎನೆ ಧನಂಜಯಂ ದರಸ್ಮಿತಾಸ್ಯನಾಗಿ,

ಇನಿತೊಂದುರ್ಬಟೆಯೇಂ ಪುಳಿಂದ ಬಿಡು ನಿನ್ನೀ ಬಿಂಕಮಂ ಮಾಣ್ಗೆ ಶ
ಸ್ತ್ರನಿಶಾತಾಸ್ತ್ರನಿಕಾಯದಿಂ ನೆಗಟ್ವೆ ಯುದ್ಧಂ ಮುಷ್ಟಿಯುದ್ಧಕ್ಕೆ ನಿಂ
ದನುವಾಗೀಗಳೆ ತೋರ್ಪೆನೆನ್ನ ಬಲವದ್ದೋರ್ದಂಡಶೌರ್ಯಪ್ರವ
ರ್ತನಮಂ ನೋಡುಗೆ ನಿನ್ನ ನಚ್ಚಿನ ಕಿರಾತವ್ರಾತಮೆನ್ನಂದಮಂ ೧೬

ಎಂದು ನುಡಿದ ಸಂಕ್ರಂದನನಂದನನ ನಿರರ್ಗಳನಿಸ್ಸಹಾಯಪರಾಕ್ರಮೋಕ್ತಿಗೇಳ್ದು ನೆರೆದ ಗಣಸಂದೋಹಮುಮಂದಾಶ್ಚರ್ಯಮಂ ತಾಳ್ದು ನೆಲವೆರ್ಚೆ ಪೊಗಟುತ್ತಿರೆ ಬಟು ನಿಂದಿರ್ದ ಗಿರಿನಂದನೆಯೊಡನೆ ಗಿರೀಶನಿಂತೆಂದಂ.

ಎಲೆ ಗಿರಿಜಾತೆ ನೋಡಿವನ ಸಾಹಸಮಂ ಸಲೆ ನಾಲ್ಕು ತಿಂಗೆಳುಂ
ವಿಲಸಿತಜೀರ್ಣಪರ್ಣಮನೆ ಮೆಲ್ದುಟುದೊಪ್ಪುವ ನಾಲ್ಕು ತಿಂಗಳ
ಗ್ಗಲಿಸಿದ ವಾಯುವಂ ಸವಿದು ನಿಗ್ರಹಿಸಿರ್ದ ಶರೀರದಿಂದದೇಂ
ಕಲಿಯೊ ಕಡಂಗಿ ಕಾದಿದನಿವಂ ಸಮುದಂಡಿಯೊಳೆನ್ನೊಳರ್ಜುನಂ ೧೭

ಕಾದುವ ಕೆಯ್ದು ಪೋದುದೆನುತಳ್ಕಿದನೇ ಭುಜಶೌರ್ಯಶಕ್ತಿ ಗೆಂ
ಟಾದುದೆ ಸಾರವೀರರಸಮೇಂ ಬಿಸಿಗುಂದಿದುದೇ ಸಹಾಯಮಂ
ಸಾದರವೊಚ್ಚತಂ ಪಡೆವೆನೆಂಬಭಿಲಾಷೆಯನಾಳ್ದುದೇ ಮನಂ
ಕಾದಲೆ ನೋಟ್ಪುದೀತನ ಸಮಗ್ರಪರಾಕ್ರಮಮುರ್ವಿ ಪೆರ್ಚುಗುಂ ೧೮

ಕುಲಗಿರಿ ಸಂಚಲಿಸಿದೊಡಂ
ಜ್ವಲದೌರ್ವಂ ತಂಪನಾಳ್ದೊಡಂ ರವಿಬಿಂಬಂ
ಸಲೆ ಕರ್ಗಿದೊಡಂ ರಣದೊಳ್
ಕಲಿಪಾರ್ಥಂ ಭೀತಿವಟ್ಟು ಬೆನ್ಗೊಟ್ಟಪನೇ ೧೯

ಹರಿಯಂಶೋದ್ಭೂತನೀತಂ ಶುಭಗುಣನಿಧಿ ಮತ್ಪಾದಭಕ್ತಂ ಸಪತ್ನೋ
ತ್ಕರಸಂಹಾರಾರ್ಥಮೆನ್ನೊಳ್ ಪಡೆಯಲೆಳಸಿ ದಿವ್ಯಾಸ್ತ್ರಮಂ ದಲ್
ತಪಸ್ಸಂ
ಚರಣಂಬೆತ್ತಿಲ್ಲಿ ನಿಂದಂ ಕಿಟಿಯ ಕತದೆ ಮದ್ದ್ವೇಷಮಂ ತಾಳ್ದಿದಂ ಸಂ
ಗರಮಂ ಕೆಯ್ಕೊಂಡಿವಂಗಿತ್ತಪೆನಿವನೆಳಸಿರ್ದಸ್ತ್ರಮಂ ಶೈಲಪುತ್ರೀ ೨೦

ಶರದಭ್ಯರ್ಥನದಿಂ ತಪಃಸ್ಥಿತಿಯೊಳಿರ್ದುಂ ಶಾಂತಿಯಂ ಮಾಣ್ದು ಸೂ
ಕರನಂ ದಾಣದಿನೆಚ್ಚುದಂ ಬಯಸುತೆನ್ನೊಳ್ ಕಾಳೆಗಂಗೆಯ್ದನೀ
ನರನೆಂದಾತನ ದೋಷಮಂ ನೆನೆಯದಾದಂ ಕೀರ್ತಿಸುತ್ತಿರ್ದನೀ
ಶ್ವರಿಯೊಳ್ ಶಂಭುಗೆ ಭಕ್ತವತ್ಸಲತೆ ಸಲ್ಗುಂ ಮೇಣ್ ಪೆಱರ್ಗೆಕ್ಕುಮೇ ೨೧

ಎನಿಸಿ ಭಕ್ತಜನಪ್ರಣಯಲೀಲಾಲಸಂ ಶೂಲಧರನೊಯ್ಯನೆ ಪೊಗೞ್ದ ನಂತರಂ ಮುಷ್ಟಿಯುದ್ಧಸನ್ನದ್ಧನಾಗಿ ನಿಂದ ಪಾರ್ಥನಿದಿರ್ಗೆವಂದೋರೊರ್ವರು ದೀರ್ಘರೋಷಾವೇಶಪರುಷಪಾಟಲಿತಕಟಾಕ್ಷದಿನಡರೆ ನೋಡಿ ಬಾಹಾಸ್ಫಾಲನಂ ಗೆಯ್ಯಲೊಡನೆ,

ತುಳ್ಕಿದುದಂಬುಧಿ ತಾರೆಗ
ಳುಳ್ಕಿದುವಾಗಸದೆ ನಡುಗಿದತ್ತಿಳೆ ಫಣಿಪಂ
ಬಳ್ಕಿದನಗಶಿಖರಂಗಳ್
ಕಟ್ಕನೆ ಕೆಡೆದುವು ತದೀಯಪಟುನಿಸ್ವನದಿಂ ೨೨

ಅನಂತರಮಿರ್ಬರುಂ ನಿರ್ಭರದಿಂದುರ್ಬಿ ಬೊಬ್ಬೆಗೊಟ್ಟಬ್ಬರಿಸಿ ಗಜಱಿ ಗರ್ಜಿಸಿ ಕಡಂಗಿ ಕೆಯ್ವಿಡಿದು ಪಳಂಚಿ ಪತ್ತಿ,

ಕುಲಗಿರಿಯುಗ್ಮಮಾಳ್ದ ಪುರುಷಾಕೃತಿಯಿಂದೆ ಪಳಂಚುವಂತಿರು
ಜ್ಜ್ವಲಬಡಬಾಬ್ಧಿವಹ್ನಿಯುಗಮಾಂತು ನರಾಂಗಮನಣ್ಮಿ ಕಾದುವಂ
ತಲಘುಮೃಗಾಧಿಪದ್ವಯಮೊಡಂಬಡೆ ಮಾನವವೇಷಮುರ್ಕೆ ಸಂ
ಚಲಿಸದೆ ಪೋರ್ವವೊಲ್ ಪೊಣರ್ದರುರ್ಬಿ ವೃಷಧ್ವಜಮರ್ಕಟಧ್ವಜರ್ ೨೩

ಪಿಡಿಯೆ ಕರಾಗ್ರಮಂ ಬಿಡಿಸುತೌಂಕೆ ಬಿದಿರ್ಚುವ ತಟ್ಕೆಗೆಯ್ಯೆ ಮೆಯ್
ಗೊಡಪಿ ತೆರಳ್ಚುವವ್ವಳಿಸೆ ಸಿಲ್ಕದೆ ಲಂಘಿಪ ಸಂಚಿನಿಂದೆ ಪೊ
ಯ್ದೊಡೆ ಪೊಳೆವಾರ್ಪಿನಿಂದೆಱಗೆ ಚಿಮ್ಮುವ ಬಾಹುಗಳಿಂದೆ ಕಂಠಮಂ
ತೊಡರೆ ಕುನುಂಗಿ ಪಯ್ಸರಿಪ ಬಿನ್ನಣವೊಪ್ಪೆ ಕಡಂಗಿ ಕಾದಿದರ್ ೨೪

ನಿಡುಸುಯ್ಯಿಂ ಭುಗಿಲೆನೆ ಪೊಱ
ಮಡೆ ಪೊಗೆ ಮಿಗೆ ಮುಷ್ಟಿಯುಗಳಘಟ್ಟನದಿಂ ಕೆಂ
ಗಿಡಿ ಕೆದಱೆ ಗರ್ಜನಕ್ಕಿಳೆ
ನಡುಗೆ ಮಹಾಹವಮನೆಸಗಿದರ್ ಧುರಗಲಿಗಳ್ ೨೫

ಪದಘಾತಕ್ಕೆ ಧರಾತಳಂ ಕುಸಿಯೆ ಕೂರ್ಮಂ ಕುರ್ಗೆ ಭೋಗೀಂದ್ರನ
ಗ್ಗದ ದೀರ್ಘಸ್ಫಟಿ ಕಂಠದೊಳ್ ನೆಲಸೆ ಬಾಹುಭ್ರಾಂತಿಸಂಘಾತವಾ
ತದ ಘಾತಕ್ಕೆ ಪಯೋಧರಂ ಕೆದಱೆ ಬಾನೊಳ್ ಜೀರ್ಣಪರ್ಣಂದಲೊ
ಡ್ಡಿದ ವಿದ್ಯಾಧರಪುಷ್ಪಕಂ ಜಗುಳೆ ಯುದ್ಧಂಗೆಯ್ದರೀಶಾರ್ಜುನರ್ ೨೬

ತೊಡೆಯಂ ಪೊಡೆಯಂ ಭುಜಮಂ
ಮುಡುಪಂ ಪೇರುರಮನಳಿಕಮಂ ನೆತ್ತಿಯುಮಂ
ಪೆಡತಲೆಯಂ ಬರಿಯಂ ಕಾ
ಯ್ಪಿಡಿದೊರ್ವರನೊರ್ವರಣ್ಮಿ ಪೊಡೆದರ್ ಕಲಿಗಳ್ ೨೭

ಕ್ಷತರೇಖೆ ತಟ್ಟಲೀಯದೆ
ಮತಿ ಮಿಗೆ ಸಮುದಂಡಿಗೆಯ್ದನಿವನೆಂದು ಸಮು
ನ್ನತರೋಷದಿಂದೆ ತಿವಿದಂ
ಶತಮುಖಸುತನತನುಹರನ ವಕ್ಷಃಸ್ಥಳಮಂ ೨೮

ಆ ಕೆಯ್ ಮುಟ್ಟಿಂಚದ ಮುನ್ನಂ
ಲೋಕೈಕಾಧೀಶನೆತ್ತಿ ದೃಢಮುಷ್ಟಿಯನಾ

ಪಾಕರಿಪುತನಯನಂಗಮ
ನಾ ಕಪಟಕಿರಾತನೋವಿ ಮೆಲ್ಲನೆ ತಿವಿದಂ ೨೯

ಆವರಿರ್ವರ ಕಾಳೆಗಮಂ
ಸವೆಯದ ಸಾಹಸಮನೀಕ್ಷಿಸಿದ ಸುರಗಣಮುಂ
ಶಿವಗಣಮುಂ ವಿಸ್ಮಯಮಂ
ತವೆ ತಾಳ್ದಿದು ಮಚ್ಚಿ ಪೊಗಟ್ದುದಗರಿಪುಸುತನಂ ೩೦

ಮತ್ತಮಾಗಳ್,

ಮಾಣದೆ ಮತ್ತೆಱಗಿದನಾ
ಸ್ಥಾಣುವನಬ್ಬರಿಸಿ ಸಿಡಿಲ ಮಾಟ್ಕೆಯೊಳಭವಂ
ಕಾಣುತದಂ ಸೈರಿಸುತುಂ
ಕೇಣಂಬಡೆದೊತ್ತಿ ಮೆಟ್ಟಿದಂ ಗಾಂಡಿವಿಯಂ ೩೧

ಒಕ್ಕುದು ನೆತ್ತರ್ ಬಾಯಿಂ
ಮಿಕ್ಕಲರ್ದುಸಿರಿಡುವ ಮೂಗಿನೆರಡುಂ ಕಡೆಯಿಂ
ದಕ್ಕಟ ತಪ್ಪಾಯ್ತೆನುತುಂ
ಮುಕ್ಕಣ್ಣಂ ಮಱುಗಿ ಮನದೆ ಸಿಡಿಮಿಡಿಗೊಂಡಂ ೩೨

ಅಂತು ಮರುಗಿ ಕರುಣಾಕರಂ ಕಪರ್ದಿ ಕೆಯ್ದೆಗೆದು ನಿಂದಾಗಳ್,

ಬಱಿತುದು ಧೈರ್ಯವಾರ್ಧಿ ಬಱಿನಾದುದು ಪೆರ್ಚಿದ ಶಕ್ತಿ ಬಿಂಕಮುಂ
ತೊಱೆದುದು ಚಿತ್ತವೃತ್ತಿ ನೆಱೆ ನೆರ್ಗಿದುದಿಂದ್ರಿಯರಾಜಿ ಬೀತುದೆ
ಟ್ಟಿಱುವೊಳಸೋರ್ದುದುತ್ಸವಮುಡಂಗಿದುದುನ್ನತಿ ಕುಂದನಾಳ್ದನೆಂ
ಬೆಱಕದ ಹೇವಮಾವರಿಸೆ ನೊಂದು ಪಲುಂಬಿದನಾ ಧನಂಜಯಂ ೩೩

ಅಳ್ಳಿಱಿದುದು ಮಾನಸಮಂ
ತಳ್ಳಂಕಂ ತನು ಬೆಮರ್ತುದಾಹವದೆಸಕಂ

ರಿಪುಜಯಮುನಿತ್ತು ಪೊರೆ ಪುರಮಥನಾ ೪೩

ಪೊಳ್ದಾದುದು ಚಿಂತೋದ್ಗಮ
ಮುಳ್ಳಲದುರ್ದವಂಗೆ ಸೊಲದಿಂ ಸುಖಮೋಳವೇ ೩೪

ಒಳಗೊಳಗಟಿಲ್ದು ಚಿಂತಾ
ಕುಳತೆಯನೊಳಕೊಂಡು ಬೇಡಸಿವನೆನ್ನಿಂದ
ಗ್ಗಳಿಸಿದನೆ ಮತ್ಪರಾಕ್ರಮ
ಮೊಳಸೋದುರ್ದದೆ ಚಿತ್ರಮೆಂದವಂ ಖತಿಗೊಂಡಂ ೩೫

ಶಿವಪದಭಕ್ತಿಯಂ ತೊಱೆದೆನೋ ಶಿವನಿಂದೆಯನೆಯ್ದೆ ಕೇಳ್ದೆನೋ
ಶಿವನಿಜಭಕ್ತರಂ ಪಟಿದೆನೋ ಶಿವಪೂಜೆಯುಗೆಯ್ಯದನ್ನಮಂ
ಸವಿದೆನೋ ಶೈವಸುವ್ರತಮನಾಳ್ದಿಡೆವಿಟ್ಟೆನೊ ಪೂರ್ವಜನ್ಮದೊಳ್
ಶಿವ ಶಿವ ತಾನದಲ್ಲದೊಡೆ ಸಾರ್ಗುಮೆ ಸಂದೆನಗೀ ಪರಾಭವಂ ೩೬

ಎಲ್ಲಂದದಿನಾಹವದೊಳ್
ಗೆಲ್ಲಂ ಶಬರಂಗೆ ಸೋಲಮೆನಗಾಯ್ತುಕಟ
ನ್ನೆಲ್ಲಿಯದು ವಿಜಯನಾಮಸ
ಮುಲ್ಲಸಿತಖ್ಯಾತಿಯೆಂದು ಬಿಸುಸುಯ್ವುತ್ತುಂ ೩೭

ಎತ್ತಣ ಬನಮೆತ್ತಣ ಕಿಟಿ
ಯೆತ್ತಣ ಕಾಟ್ಟಿಯದನಾಗಮಂ ಶಿವ ಶಿವ ಮೇ
ಣೆತ್ತಣ ಕಾಳಗದುಜ್ಜುಗ
ಮೆತ್ತಣ ಪರಿಭವಮಿದೆನಗೆ ಸಾರ್ದುದು ಚಿತ್ರಂ ೩೮

ಈತಂ ನರನಕ್ಕುಮೊ ಪಡಿ
ಮಾತೇಂ ಮಱುಟ್ದಾನೆ ಶಬರನಪ್ಪೆನೊ ರಣಸಂ
ಜಾತಜಯಲಕ್ಷ್ಮಿಯುಗ್ಗದ
ಬೂತಾಟಮೊ ತಿಳಿಯೆನೆಂದವಂ ಚಿಂತಿಸಿದಂ ೩೯

ಎಂದು ಪಲವಂದದಿಂ ಪಲುಂಬಿ ವಿರೂಪಾಕ್ಷನುಪೇಕ್ಷೆಯಿಂದೀ ಪರಾಜಯಂ ತಗುಳ್ದುದೆಂದು ನಿಜಾಂತರಂಗದೊಳ್ ಬಗೆದು ಕರುಣಾಬ್ಧಿಯಪ್ಪ ಶಂಕರನಂ ಕಿಂಕರತೆಯಿಂ ಸರಣ್ಬೊಕ್ಕು, ತತ್ಕಾರುಣ್ಯಂಬಡೆದು ಪಗೆಯಂ ಪರಾಭವಿಪೆನೆಂದು ಕೌಂತೇಯಂ ಚಿಂತಾಪಂಕಮಂ ವಿವೇಕಜಳದಿಂ ತೊಳೆದು ವಿಮಳಮನಸ್ಕನಾಗಿ,

ಪರಮಶಿವಾಗಮೋಕ್ತವಿಧಿಯಿಂ ಮಣಲಿಂ ನೆಗಟ್ಬೊಂದು ಲಿಂಗಮಂ
ನಿರುಪಮಭಕ್ತಿಯಿಂ ತಿಱಿದು ಪಡ್ಡಳಿ ಬಂದುಗೆ ಕಕ್ಕೆ ಮುತ್ತ ಪಾ
ದರಿಗಳ ಪೂಗಳಂ ಮೃದುಳಬಿಲ್ವದಳಂಗಳನಲ್ಲಿ ತಂದು ಶಂ
ಕರನನೊಜಲ್ದು ಪೂಜಿಸಿದನರ್ಥಿತವೈರಿಜಯಂ ಧನಂಜಯಂ ೪೦

ನಿನ್ನ ಪದಭೃತ್ಯನೆನಿಸಿ
ರ್ದೆನ್ನಂ ಗೆಲ್ದಂ ಕಿರಾತನೀತನನೀಗಳ್
ಬನ್ನಂಬಡಿಸುತೆ ಸೋಲಿಪ
ಪನ್ನತಿಕೆಯನಿತ್ತು ಪೊರೆ ಕೃಪಾಳುಗಳರಸಾ ೪೧

ಎನ್ನಾಳ್ದಂ ನೀನಿರುತಿರೆ
ಬನ್ನ ವಿಡೆನಗಾಗೆ ಕೊಱತೆಯಾವಂಗೆಂಬಾ
ಬಿನ್ನಣಮಂ ತೀಱದೆನ್ನಂ
ಮನ್ನಿಸಿ ರಿಪುಜಯಮನಿತ್ತು ಪೊರೆ ಪರಮಥನಾ ೪೨

ಎಂದು ಪಲವಂದದಿಂ ನುತಿಸಿ ದೈನ್ಯಂದೋಱ ಪಾರ್ಥಂ ಪ್ರಾರ್ಥಿಸಿ[ದಂ].

## ಬೇಟೆಕ್ಕೆಟ್ಟಿನಾಪಾರ್ಥನಂ

[ಪಾರ್ಥಂ ಪುರಮಥನನಂ ಪಲವಂದದಿಂ ನುತಿಸಿ] ಶಬರಂಗಭಿಮುಖನಾಗಿ ನಿಂದು ನಿರೀಕ್ಷಿಸಿ ನಿಜಭುಜಸ್ಫಾಲನಂಗೆಯ್ದು

ಇನ್ನಜ್ಜಿಯಲ್ಕೆ ಬರ್ಪುದಲೆ ಧೂರ್ತಕಿರಾತ ಭವತ್ಪರಾಕ್ರಮ
ಪ್ರೋನ್ನತಿಯೆಟ್ಟರಂ ಪೊಱಮಡೆನ್ನಧಿನಾಥಮಹೇಶನೊಲ್ಮೆದಲ್
ಸನ್ನಿದಪ್ಪಾವುದಿಂದೆನಗೆ ನಿನ್ನಸುವಂ ನೆಱೆ ಪೀರ್ವೆನಾವದೇ
ವನ್ನಿನಗೋತು ಬರ್ಪನವನಂ ಸದೆದಿಕ್ಕುವೆನೀಕ್ಷಣಾರ್ಧದೊಳ್ ೧

ಎಂದು ರೋಷಾರುಣೇಕ್ಷಣದಿನಭೀಕ್ಷಿಸುತ್ತಿರೆಯಿರೆ,

ಮಣಲ ಲಿಂಗದ ಮಸ್ತಕಾಗ್ರದ ಪುಷ್ಪಮಂಜರಿ ಮಾಣದಾ
ಕ್ಷಣಮೆ ತಳ್ತುದದಾ ಕಿರಾತನ ಮಂಡೆಯಲ್ಲಿರೆ ಕಂಡು ಕಾ
ರಣಮಿದೇಂ ಪೊಸತೆಂದು ಸಾದ್ಭುತಮಾನಸಂ ಮುಗುಳ್ದೀಕ್ಷಿಸು
ತ್ತಣೆಯುರಂ ಬಿಡದಿತ್ತ ಲಿಂಗದ ಶೂನ್ಯಶೀರ್ಷಮನರ್ಜುನಂ ೨

ಇದನಿನ್ನುಂ ಮುಗುಳ್ಚೊರ್ಮೆ ನೋಳ್ಪೆನೆನುತಂ ಪೂಗೊಂಚಲಂ ತಂದು ಸೂ
ಡಿದನಾ ಲಿಂಗದ ಮಸ್ತಕಾಗ್ರದೊಳೆ ಸಮ್ಯಗ್ಭಕ್ತಿಯಿಂದಾಗಮೋ
ಕ್ತದ ಮಾರ್ಗಂಬಿಡಿದೊಲ್ದು ಪೂಜಿಸಿ ಕರಂ ಕೊಂಡಾಡಿ ಮೆಯ್ಯಿಕ್ಕಿ ನೋ
ಡಿದನಿತ್ತಲ್ ಶಬರೋತ್ತಮಾಂಗವೆಡೆಯುಂ ಪ್ರಾಂಚದ್ಗುಣಂ ಫಲ್ಗುಣಂ ೩

ಕಂಡನಖಂಡಪುಷ್ಪಭರಮಂಜರಿಯುಂ ಶಬರೋತ್ತಮಾಂಗದೊಳ್
ಮಂಡಿತಲಿಂಗಮಸ್ತಕದೊಳಂತದನೀಕ್ಷಿಸಿ ಕಾಣದಾದನಾ

ಖಂಡಲಸೂನುವದ್ಭುತರಸಂಬಡೆದಾಟ್ಟು ಭಯಾಬ್ಧಿಯಲ್ಲಿ ಮುಂ
ಕೊಂಡು ಮುಳುಂಗಿ ತೇಲ್ದುವಪನೀಕ್ಷಣಯುಗ್ಮಪಯಶ್ಚರದ್ವಯಂ ೪

ಹರಹರದೇವದೇವನಿವನಲ್ತೆ ಶಿವಂ ಭುವನೈಕವಲ್ಲಭಂ
ಗುರುಸಕಲಾಮರರ್ಗೆ ಶಬರಾಕೃತಿಯಿಂ ಮದನುಗ್ರಹಾರ್ಥಮೀ
ಪರಿ ನಡೆತಂದನಲ್ತೆ ತಪದುಬ್ಬೆಗದುದ್ಭ್ರಮೆ ನೆತ್ತಿವತ್ತೆ ಸೈ
ತಿರದೆ ಮರುಳ್ತನಂದಳೆದಿದಿರ್ಚಿದೆನೆನ್ನ ಪೊಲಜ್ಞನಾವನೋ ೫

ಎಂದು ಬಗೆದಾಗಳ್

ಪಡಿದೆಱೆದಂತೆ ಪಾಱಿತೆರ್ದೆ ಪನ್ವನೆ ಜುಮ್ಮೆನೆ ಮೆಯ್ಯ ವಿರ್ ಪೊದ
ಬ್ಬಿಡಿಕಿಱಿದತ್ತು ಘರ್ಮಜಲಮುಣ್ಮಿದುದಂಗದೊಳಾಗ್ರಹಗ್ರಹಂ
ಕಡೆದೊಲಗಿತ್ತು ಕೌತುಕರಸಂ ಬಗೆಗುರ್ವಿದುದುತ್ಸವಂ ಮಡ
ಲ್ತುಡರ್ದುದು ಭೀತಿ ಬೇರ್ವಱಿದುದೇಟ್ಗೆ ಎನಾಳ್ದುದು ರಾಗಸಂಪದಂ ೬

ಬೀತುದು ಬಿಂಕವೋಡಿದುದು ಮೂಢತೆ ಮೂಡಿದುದಶ್ರು ಕಣ್ಗಳೊಳ್
ಕಾತುದು ಭೀತಿವಲ್ಲರಿ ಮನೋಗತಮುಂ ತಱಿಸಂದು ನಿಂದುದು
ದ್ಭೂತಮಹಾದ್ಭುತಂ ಮನದೊಳಂಗದೊಳಾಯ್ತು ವಿವರ್ಣವೃತ್ತಿ ಚಿಂ
ತಾತುರನಾಗಿ ಬೆಳ್ಪಳಿಸಿ ಬೇವಸಮಂ ತಳೆದಂ ಧನಂಜಯಂ ೭

ಉಱಿವೆಳಗು ಸಂಜೆ ನಸುಮು
ಬ್ಬಳುರ್ದಂಬರದಂತೆ ತಿಳಿವು ರಾಗಂ ನೆಗಟ್ದು
ಮ್ಮಳಮನೊಳಕೊಂಡ ಬಗೆಯಿಂ
ತಳವೆಳಗಾಗುತ್ತೆ ಪಾರ್ಥನಂದಿಂತೆಂದಂ ೮

ತಿಳಿದೆನೆ ಶಂಭುವೆಂದು ಬಹುಬಾಣದಿನೆಚ್ಚೊಡೆ ತಾಗದಂದದೇಂ
ತಿಳಿದೆನೆ ದಿವ್ಯಮಾರ್ಗಣದಿನಾಸಿಸೆ ತಳ್ವದೆ ನುಂಗಿದಂದದೇಂ
ತಿಳಿದೆನೆ ಕೆಯ್ಯ ಚಾಪಮನಡಾಯುಧಮಂ ಸೆಳೆದೀಟ್ದುಕೊಂಡೊಡಂ
ತಿಳಿವೊಳಸಾರ್ದುದಕ್ಕಟ ಪುರಾಕೃತಕರ್ಮದ ಪೆರ್ಮೆಯೆಂತುಟೋ ೯

ಆವನ ಮಾಯೆಯಿಂ ತ್ರಿಜಗಮಾದುದು ಸೂರ್ಯಸುಧಾಕರರ್ ಪೊಡ
ಱ್ದಾವನ ತೇಜದಿಂ ಬೆಳಗುವರ್ ಭುವ ಶೋತ್ಕರರಕ್ಷೆ ಶಿಕ್ಷೆ ಮೇಣ್
ಆವನಧೀನಮಾವನೊಳೆ ತೋರ್ಪುದು ವಿಶ್ವಮಿದೆಂದುವಾ ಮಹಾ
ದೇವನೊಳಾಹವಂ ಗಡೆನಗದ್ಭುತಮದ್ಭುತಮೇನನೆಂದಪೆಂ ೧೦

ಪರಮೈಶ್ವರ್ಯಾಸ್ಪದನೊಳ್
ಪರಿಪೂರ್ಣಪರಪ್ರಕಾಶನೊಳ್ ಪಶುಪತಿಯೊಳ್
ಪರಶಕ್ತಿಯುಕ್ತನೊಳ್ ಪರ
ತರಮಹಿಮನೊಳಾಂತಿದಿರ್ಚುತೆಚ್ಚಾಡಿದೆನೇ ೧೧

ಶಿವ ಶಿವ ಸಲ್ವುದೇ ಸಮರಮಿಂತೆನಗದ್ವಯನೊಳ್ ಮಹೇಶನೊಳ್
ಭವಹರನೊಳ್ ಮಹಾಮಹಿಮನೊಳ್ ಜ್ವಲನಾಕ್ಷನೊಳಕ್ಷಯಾಂಗನೊಳ್
ಪ್ರವಿದಿತನಾದಬಿಂದುಕಳೆಯಿಂ ಮಿಗೆ ಮಾಜಿದನೊಳ್ ಶ್ರುತಿಸ್ಮೃತಿ
ಸ್ತವನಕತೀತನೊಳ್ ಜಗದ ಜೀವರನಾಡಿಪ ಸೂತ್ರಧಾರನೊಳ್ ೧೨

ಹರನೊಲವನಾಂಪ ಬಗೆಯಿಂ
ಪಿರಿದು ತಪಂಗೆಯ್ದು ಬಟಿಕಮದನುಳಿದೀಗಳ್
ಕರಮಜ್ಞತೆಯಿಂ ಪೊಣರ್ದೆಂ
ಹರಚರಣದ್ರೋಹಕಿಂತು ಭಾಜನನಾದೆಂ ೧೩

ಮೊದಲೆಮಾತುಗಳ್ ಗಡ ಮಹಾನಿಗಮೋಕ್ತಿಗತೀತನೊಳ್ ಜಯಾ
ಹ್ಲಾದದ ಝುಂಕೆಗಳ್ ಗಡ ಜಗತ್ತ್ರಯದುರ್ಜಯನೊಳ್ ಶರೌಘದಿಂ
ಭೇದಿಪ ಬಿನ್ನಣಂ ಗಡ ಜಿತಾಂತಕನೊಳ್ ಮಿಗೆ ಮುಷ್ಟಿಯುದ್ಧದಿಂ
ಕಾದುವ ಕಜ್ಜಮುಂ ಗಡ ನಿರಂಗನೊಳಿಂತಿದು ಚಿತ್ರಮಲ್ಲವೇ ೧೪

ಭಯಭಕ್ತಿಸ್ಪೃಹೆವೆತ್ತು ನೋಟ್ಪ ನಯನಂ ರೋಷಾರುಣಾವೇಶದು
ರ್ಣಯಕಿಂಬಾಯ್ತು ಪದಾಬ್ಜಪೂಜನಕೆ ಪಕ್ಕಾಗಿರ್ದ ಕೆಯ್ ಕೆಯ್ದುವ

Funding: Tattva Heritage Foundation,Kolkata. Digitization: eGangotri.



ರಯದಿಂ ತಾಳ್ದಿದಿರಾಂತುದೀಶ್ವರಮಹಾಮಂತ್ರಕ್ಕೆ ಬೀಜಾಪದ ಜಿ
ಷ್ಣುಯಿ ಮಾಱುತ್ತರವಾಂತುದಕ್ಕಟ ಮಹಾವ್ಯಾಮೋಹವೇಗೆಯ್ದುದೋ

ಎಂದಿಂತು ಚಿಂತಿಸುತೆ ಪಲ
ವಂದದೆ ಬಗೆನೊಂದು ಹಮ್ಮದಂಬೋಗಿರೆ ಪಾ
ರ್ಥಂ ದಯೆಯಿಂದವನಿರ್ದೆಡೆ
ಗಿಂದುಧರಂ ತಳವರ್ತ ತಣ್ಪುವೀಱುದನಾಗಳ್ ೧೭

ಪೊಗೆಯಳಿದಗ್ನಿಯಂತೆ ಮುಗಿಲೋಡಿದ ಭಾಸ್ಕರನಂತೆ ಮಾಯೆ ಮೆಯ್
ದೆಗೆದ ನಿಜಾತ್ಮನಂತಿರೊಱೆಯುರ್ಚಿದ ಕೂರಸಿಯಂತೆ ಕಾಂತಿ ಕೆಯ್
ಮಿಗೆ ಶಬರಾಂಗಮಂ ತೊಱೆದು ಪೂರ್ವನಿಜಾಕೃತಿವೆತ್ತಲಂಪಿನಿಂ
ಸೊಗಯಿಸುತಿರ್ದನಾಗಮಶಿರಂ ಪೊಗೞುತ್ತಿರೆ ಚಂದ್ರಶೇಖರಂ ೧೮

ವಿತತಸುಗಂಧಿ ಸಾರಸುರಭೀಕೃತದಿಙ್ಮುಖಚಂಚರೀಕಸಂ
ಗತಮಕರಂದಪೂರ್ಣಸುಮನೋಗಣಪಾಣಿವಿಮುಕ್ತಭೂರಿದಿ
ವ್ಯತರುಲತಾಂತವೃಷ್ಟಿ ಸುರಭೇರಿಯ ನಿರ್ಭರನಾದಮುಣ್ಮೆ ಸ
ನ್ನುತಸುರರಾರ್ದುಘೋಷೆಯೆನೆ ವಿಜೃಂಭಿಸಿ ಸೂಸಿದುದೀಶ್ವರಾಂಘ್ರಿಯೊಳ್

ಹರಗಣಮುಂ ಸುರಗಣಮುಂ
ಕಿರಾತವೇಷಮನಗಲ್ದು ದಿವ್ಯಾಭರಣಾಂ
ಬರಗಂಧಮಾಲಿಕಾಬಂ
ಧುರಮೆಸೆದುದು ಮುನ್ನಿನಂತಿರಭವನ ಪೊರೆಯೊಳ್ ೧೯

ಉೞಿದು ಪುಳಿಂದಿನೀವಿಹಿತವಿಭ್ರಮಮಂ ಸುರಕಾಮಿನೀಜನಂ
ಬಳಸಿರೆ ತಾನುಮಂತೆ ನಗನಂದನೆ ಹಾರಕಿರೀಟಕುಂಡಲೋ
ಜ್ಜ್ವಳಕಳಕಾಂಚಿ ಕಂಕಣಪದಾಂಗದಮುಖ್ಯವಿಭೂಷಣಾಳಿ ಕಣ್
ಗೊಳಿಸಿರೆ ದೇವದೇವನೆಡದೊಳ್ ನೆಲಸಿರ್ದಳುದಾರಶೋಭೆಯಿಂ ೨೦

ಆಗಳ್,

ಬೆಮರ್ವ ಕಳೇವರಂ ಪುರಿವ ಸಂತಸಗಣ್ಬಸಿ ತಳ್ತ ಕಂಪನಂ
ಸಿವಿರ್ದೆಸೆವಂಗರೋವುತತಿ ಕಣ್ಗೊಳಿಸುತ್ತಿರೆ ತಳ್ವದೆಟ್ಟಿ ಸಂ
ಭ್ರಮದ ಪೊದಟ್ಕೆಯಿಂ ಮುದದ ಪೆರ್ಚುಗೆ ಸಂದಣಿಗೊಳ್ವಿನಂ ಪದಾ
ಬ್ಜಮನವುದೊರ್ಪ್ಪೆ ಪೌಳಿ ಮಣಿದಂ ಮಹಿಯಂ ತಸು ಸೋಂಕೆ ಪಾಂಡವಂ

ಅಂತೆಱಗಿ ಸರುಜಂ ಸಂಜೀವನಮಂ ಸವಿದಂತೆ, ಬಡವಂ ಕಡವರಂಗಂ ಡಂತೆ, ಕಡಲೊಳಾಟ್ವಿಂ ತೆಪ್ಪಮನಪ್ಪಿದಂತೆ, ಜಾತ್ಯಂಧಂ ಕಣ್ಬಡೆದಂತೆ ನಿರತಿಶಯಸಂಮುದಮನೊಳಕೊಂಡು ಕರಾರವಿಂದಂಗಳಂ ಪಣೆಯೊಳವು ರ್ಚಿ ನಿಂದು;

ಪದತಳದೊಳ್ ತೊಡಂಕಿ ಪರಿದಾಡಿ ಪೊದಟ್ಟಿ ಸೆವಂಗದೇಶದೊಳ್
ಪದೆದುರದಲ್ಲಿ ಸಯ್ವರಿದು ಮಂಜುಳಕಂಠವುನಪ್ಪಿ ವಕ್ತ್ರಸ
ದ್ಮದೊಳಿಡೆಗೊಂಡು ಸುತ್ತಿ ಸುಟಿದಾಡಿ ದಟಿಲ್ದು ಸರಿತ್ಸುಧಾಂಶುಗಳ್
ಪುದಿದ ತದೀಯಮೌಳಿಯೊಳೆ ವಿಶ್ರಮಿಸಿರ್ದುದು ದೃಷ್ಟಿ ಪಾರ್ಥನಾ ೨೨

ಅಂತು ಸಡಗರದಿನವನಭವನನಭೀಕ್ಷಿಸಿ,

ಚಳಚಿತ್ತಂ ಜಾಡ್ಯವೃತ್ತಂ ಚಪಳಮತಿ ಮದಾಂಧಂ ಮಹಾಮೋಹ ಮೂರ್ಛಾ
ವಿಳನಾಶಾಪಾಶಬದ್ಧಂ ಕುಟಿಲನಧಮನಾದೆನ್ನೊಳಾರಯ್ವುದೇಂ ನಿ
ರ್ಮಳಭಕ್ತಿಜ್ಞಾನಭಾಸ್ವದ್ಗುಣಗಣಮನುಮಾನಾಥ ಸರ್ವಾಪರಾಧಂ
ಗಳನೀಗಳ್ ತಳ್ವದೆಂತುಂ ಮಱೆ ಪೊರೆ ಪುರುಳಿಲ್ಲಿಲ್ಲಮೆನ್ನೊಳ್ ಪುರಾರೀ

ಅಱಿದಱಿದುಂ ಮತಿಭ್ರಮಿತನಾದ ಮದಾಂಧಕನಾನೆ ಕಂಡು ಕಂ
ಡೆಱಗದ ಖೂಳನಾನೆ ಕುಱಿವಾಸಿಸನಾನೆ ಕುಬುದ್ಧಿಯಾನೆ ಕ
ಟ್ಟೆಱಿಕೆಯ ದುಷ್ಟನಾನೆ ಮಱೆ ದೇವ ಮದೀಯಶತಾಪರಾಧಮಂ
ಮೆಱೆ ಕರುಣಾಬ್ಧಿ ನಿನ್ನ ಸುಗುಣೋನ್ನತಿಯಂ ಭುವನೈಕವಲ್ಲಭಾ ೨೪

ವ್ಯೋಮಕಚಾಭಿರಾಮ ತತಸಾಮ ಸುಧಾಮ ಸುರಾಮ ಸಜ್ಜನ
ಪ್ರೇಮ ನಿರಾಮಯಾಂಗ ಪರಭೀಮ ಸುನಾಮ ನಿಕಾಮ ನಿರ್ಜರ
ಸ್ತೋಮಲಲಾಮ ಹೇಮನಗಧಾಮ ಜಗತ್ರಯಸಾರ್ವಭೌಮ ಸು
ತ್ರಾಮಮುಖಾಮರಾರ್ಚ್ಯ ಜಿತಕಾಮ ಸದಾಮಳ ಸೋಮಭೂಷಣಾ ೨೫

ಸದ್ಯೋಜಾತಾದಿಪಂಚಾನನದೆ ಪಡೆದು ಮಹ್ಯಾದಿಭೂತಂಗಳಂ ತ
ಳ್ತುದ್ಯೋಗಂಬೆತ್ತು ಪಂಚೀಕರಿಸಿ ಬೆರಸುತಯ್ದುಯ್ದು ಭೂತಂಗಳಿಂದಂ
ಪ್ರದ್ಯೋತಾತ್ಮಾಂಗಮಂ ಮುನ್ನೆರೆಪಿ ನೆಗಲ್ದು ತದ್ಯೋಗಮಂ ಚೇತನಾಂತ
ಶ್ಚಿದ್ವ್ಯಕ್ತಂ ಗುಪ್ತಿಯಿಂ ಪ್ರೇರಕನೆನಿಸಿದಪಯ್ ಸೂಕ್ಷ್ಮರೂಪಿಂ ಮಹೇಶಾ

ಭವವಾರಾಶಿವಹಿತ್ರಮಲ್ತೆ ಭವದೀಯಂ ದಿವ್ಯನಾಮಂ ಕೃಪಾ
ರ್ಣವ ಮಾಯಾಮಯಮರ್ದನೌಷಧಮೆ ದಲ್ ಭವ್ಯರ್ಗೆ ನಿನ್ನೀ ಗುಣ
ಸ್ತವಮೆಂತುಂ ಭವದಂಘ್ರಿಚಿಂತನಮೆ ಕೇಳ್ ಕೈವಲ್ಯಲಕ್ಷ್ಮೀಸುಖೋ
ತ್ಸವಮಂ ಸಾರ್ಚುವ ದೂತಿ ನಿಕ್ಕುವಮಿದಕ್ಕುಂ ಧಾತ್ರಿಯೊಳ್ ಶಂಕರಾ

ಎಂದು ಪರಮೋತ್ಸವದಿಂ ಸನ್ನುತಿಗೆಯ್ದು ಮತ್ತಮಿರದೆ,

ಅತಿಕೋಪಾತುರನಾಗಿ ಮಾಳ್ಪ ತಪಮಂ ನೀಗಾಡಿ ಮುಂಬಿಟ್ಟ ಸ
ಕ್ಷತಕಾಯೋಗ್ರವರಾಹಮಂ ಸದೆದದಂ ಕೊಳ್ವಾಸೆಯಿಂದಜ್ಞತಾ
ಸ್ಥಿತಿವೆತ್ತೆಚ್ಚು ಶರಂಗಳಿಂ ಪೊಣರ್ದೆನೆನ್ನಿಂ ದ್ರೋಹಿಯಾವಂ ಜಗತ್
ಪತಿ ನಿನ್ನಿಂ ಪೆಱನಾವನೀ ಭುವನದೊಳ್ ದೇವಂ ಕ್ಷಮಾಸಂಯುತಂ ೨೬

ಎಂದು ದೈನ್ಯಂದೋಱಿ ಭಕ್ತಿಭರದಿಂ ಮುಗಲ್ದುಂ ದಂಡಪ್ರಣಾಮಂ
ಗೆಯ್ದು ಪದಯುಗಮಂ ತೆಗೆದು ಬಿಗಿದಪ್ಪಿ ನೆತ್ತಿಯೊಳ್ ಪೊತ್ತು,

ಪುಟ್ಟಿಂದು ಸಫಲಮಾದುದು
ನೆಟ್ಟನೆ ಮದ್ವಂಶಕುಸುಮಮುಲರ್ದುದು ಪೆಱತೇಂ .
ಮುಟ್ಟಿದೆನತಿಶಯಪದವಿಯ
ಬಟ್ಟೆಯನೆಲೆ ದೇವದೇವ ನೀನೊಲ್ದುದಱಿಂ ೨೭

ಎಂದು ಸನ್ನುತಿಗೆಯ್ವ ಪಾರ್ಥನ ಸಮುನ್ನತಭಕ್ತಿಭಾವಕ್ಕೆ ಭವಾನೀ ರಮಣಂ ಮೆಚ್ಚಿ ಮನಂದಣಿದು,

ಪದೆದಮರ್ದಪ್ಪಿದಂ ಗುಹಗಜಾಸ್ಯರನಪ್ಪುವ ತೋಳ್ಗಳಿಂದೆ ಮಾ
ಣದೆ ನರನಂ ಮೃಡಂ ಪರಸಿದಂ ನಿಗಮಂಗಳ ಪೆತ್ತ ಬಾಯ್ಗಳಿಂ
ಮುದಮಲರ್ವಂತೆ ಮೆಯ್ದಡಪಿದಂ ವರವೀವ ಕರಾಬ್ಜದಿಂದೆ ನೋ
ಡಿದನಖಿಳಾಘಮಂ ತೆಮರ್ವ ಕಣ್ಗಳಿನಾ ನರನೇಂ ಕೃತಾರ್ಥನೋ ೩೦

ಅಂತು ಮನ್ನಿಸಿ ಮತ್ತಮಿಂತೆಂದೆ,

ನಿನ್ನ ಕಟೂಕ್ತಿ ಮಂತ್ರಮೆನಗೆಚ್ಚ ಶರಾವಳಿ ಪುಷ್ಪಸಂಚಯಂ
ನಿನ್ನ ಸರೋಷವೀಕ್ಷಣದ ದೀಧಿತಿ ದೀಪಿಕೆಯರ್ಚನೋಚಿತಂ
ನಿನ್ನ ಧನುರ್ಲತಾಹತಿಯ ಬಾಸುಳೆ ಪೂಗಳ ಮಾಲೆಯೊಚ್ಚತಂ
ನಿನ್ನಯ ಮುಷ್ಟಿಯುದ್ಧಮದು ಮತ್ಪದಪೂಜೆ ನಿಜಂ ಧನಂಜಯಾ ೩೧

ಎಂದು ಕೃಪಾಪಾಂಗದಿನಭೀಕ್ಷಿಸಿ,

ಇದು ನಿನ್ನ ವರಶರಾಸನ
ಮಿದು ಶರಮಿದು ಖಡ್ಗಮಿಂತಿದಂ ಪಿಡಿಯೆಂದಾ
ಮದನರಿಪುವಿತ್ತು ಮುಂಕೊಂ
ಡುದನಾವುದು ನಿನ್ನ ಭೀಷ್ಟಮದನೊರೆಯೆಂದಂ ೩೨

ಎನೆ ಮಹೋತ್ಸವಂದಳೆದು ಕೆಯ್ದಾವರೆಗಳಂ ಮುಗಿದು

ಕರುಣಿಪುದೆನಗೆಲೆ ಕರುಣಾ
ಕರ ಪಾಶುಪತಾಸ್ತ್ರಮಂ ಮಹಾಬ್ರಹ್ಮಶಿರಃ
ಶರಮಂ ಸಮಸ್ತರಿಪುಸಂ
ಹರಮಂ ದಯೆಯಿಂದೆನುತ್ತೆ ಬೇಡುತ್ತಾಗಳ್ ೩೩

ಸರದೊಳ್ ಮಿಂದೆಸಗುತ್ತುಮಾಚಮನಮಂ ಸದ್ಭಕ್ತಿಯಿಂ ಪಾದಪಂ
ಕರುಹಕ್ಕೊಲ್ದೆರಗಿರ್ದ ಗಾಂಡಿವಿಗೆ ತತ್ತನ್ಮಂತ್ರಪೂರ್ವಂ ಕೃಪಾ

ಭಟತಂ ಬ್ರಹ್ಮಶಿರೋಸ್ತ್ರವುಂ ಕರುಣಿಸುತ್ತುಂ ಮತ್ತಮಿತ್ತಂ ಗುಣಾ
ಭರಣಂ ಪಾಶುಪತಾಸ್ತ್ರಮುಂ ಪದೆಪಿನಿಂ ಕೊಂಡಾಡೆ ದೇವವ್ರಜಂ ೩೪

ಒರೆದೇಕಾಂತದೊಳೊಲ್ಪಿನಿಂದೆ ನಿಜಭಾಸ್ವತ್ತತ್ತ್ವಮುಂ ಮೋಕ್ಷದೊಂ
ದಿರವಂ ನಿನ್ನ ಸಮಸ್ತಕಾರ್ಯಕೆ ಸಹಾಯಂ ಮಾಣದೆನ್ನಂಶಮಾ
ದರವಿಂದಾಂಬಕನಂತಱಿಂ ನಿನಗೆ ಕುಂದೆಂದುಂ ವಲಂ ತೋಱಿದಾಂ
ತರಿಯಂ ಗೆಲ್ದಪೆ ಸೌಖ್ಯಮಕ್ಕುಮೆನುತುಂ ಪೇಳ್ದಂ ಭವಾನೀಧವಂ ೩೫

ಆಗಳ್ ನಿಜೇಷ್ಟಲಾಭಮುದಿತಾಂತಃಕರಣಂ ಪುರಂದರನಂದನಂ ಪುರ ಹರನ ಪೊರೆಯೊಳೆಸೆವ ಕರುಣಾರಸಭರಿತೆಯುಂ ಗಿರಿತನುಜೆಯುಂ ಕಂಡು ಸಾಷ್ಟಾಂಗವೆಱಗಿ ನಿಂದು ಕರಾಂಜಲಿವೆರಸು,

ಕಮಲಭವಾಂಡಕೋಟಿಗಳನೇಕನಿಜಾಂಶದೆ ಪೆತ್ತು ಮೇಣವಂ
ಪ್ರಮುದದಿನೋವಿ ಚಿದ್ಗಗನರೂಪದಿನಾಂತರಬಾಹ್ಯದೊಳ್ ಸಮಾ
ಕ್ರಮಿಸಿ ಮುಸುಂಕಿ ಸಂಹರಿಸುತಂತ್ಯದೊಳದ್ವಯಮಾದ ಬೊಮ್ಮದೊಳ್
ಸಮಂಸವಾಳ್ದ ನಿನ್ನಿರವನಾರ್ ಸಲೆ ಪೇಳ್ವರೊ ಸರ್ವಮಂಗಳೇ ೩೬

ಎಂದು ಸಂದಣಿಪಾನಂದದಿಂ ಸನ್ನುತಿಗೆಯ್ವ ಕರ್ಣರಿಪುವನಪರ್ಣೆ ಪೂರ್ಣಕೃಪೆಯಿನಭೀಕ್ಷಿಸಿ,

ಬಾರೆಲೆ ಪದ್ಮಲೋಚನನ ಮಯ್ದುನ ಪಾಂಡವ ನಿನ್ನ ಭಕ್ತಿವಿ
ಸ್ತಾರಮಿದಿತ್ತುದೆನ್ನ ಬಗೆಗುತ್ಸವಮುಂ ಪಿಡಿ ಕೊಟ್ಟಪೆಂ ಭವದ್
ವೈರಿನಿಕಾಯಮುಂ ಕ್ಷಣದೊಳರ್ದಿಪ ಬಾಣಮನೆಂದು ಸದ್ಗುಣಾ
ಧಾರೆ ಧರಾಧರೇಂದ್ರಸುತೆಯಿತ್ತಳುದಾರತರಾಂಜನಾಸ್ತ್ರಮಂ ೩೭

ಪೊದಲೊಳಿದೊಂದು ಪತ್ತು ತುಡುವಲ್ಲಿ ಶತಂ ಬಿಡುವಲ್ಲಿ ಸಾಸಿರಂ
ಪದವಿಡುವಲ್ಲಿ ವೈರಿಶರಸಂಹತಿಯಂ ತಱಿವಲ್ಲಿ ಲಕ್ಷಮು
ಗ್ಗದ ಗತಿಯಲ್ಲಿ ಕೋಟಿ ಸಮರಾಂಕಣದೊಳ್ ಗಣನಾವಿಹೀನಮ
ಪ್ಪುದು ರಿಪುವೃಂದಮುಂ ತವಿಸಿ ನಿನ್ನೆಡೆಗೆಯ್ದುಗುಮೀ ಮಹಾಶರಂ ೩೮

ಎಂದೊರೆದು ಕರುಣಿಸುತೆ ಗಿರಿ
ನಂದನೆ ಭುವನೈಕಮಾತೆ ಜಯಮಂ ಪಡೆ ನೀಂ
ಕಂದ ಸಮರಾಂಗಣದೊಳೆನು
ತಂದಮರರ್ ಪೊಗೞೆ ಪರಸಿದಳ್ ಗಾಂಡಿವಿಯಂ ೩೯

ಶಿವಪಾದಾಬ್ಜದ ಸೋಂಕಿನಿಂ ವಿಮಳತೇಜಃಸ್ಫೂರ್ತಿ ಮೆಯ್ವೆರ್ಚೆ ಪೊ
ಣ್ಮುವ ಮಂದಸ್ಮಿತಸಾಂದ್ರಚಂದ್ರಿಕೆ ಪೊದಱ್ದಾಸ್ಯೇಂದು ಕಣ್ಗೊಪ್ಪೆ ಕಾಂ
ತಿವಿಶೇಷಸ್ಫುಟಫುಲ್ಲಲೋಚನಯುಗಂ ಚೆಲ್ವಾಗೆ ಸೌಂದರ್ಯ ಸಾ
ರವಿರಾಜತ್ತನು ಗಾಡಿವೆತ್ತು ಮೆಱೆದಂ ಗಾಂಡೀವಚಾಪಾಯುಧಂ ೪೦

ಅಂತೆಸೆದಿರ್ಪಿನಮಾಗಳ್,

ಸುರಲೋಕಕ್ಕಿರದೆಯ್ದಿ ನಿರ್ಜರವರಂಗಾನಂದಮಂ ಸಾರ್ಚಿ ಸಾ
ದರಮಲ್ಲಿಂ ಬೞಿಕೆಯ್ದಿ ಧರ್ಮತನಯಂ ಮುಂತಾದ ಭಾಸ್ವತ್ಸಹೋ
ದರರೊಳ್ ನೀಂ ಬೆರೆದಾಂತ ವೈರಿಗಳನೆಲ್ಲಾ ಬಾಣದಿಂ ಗೆಲ್ದು ಭಾ
ಸುರಸಾಮ್ರಾಜ್ಯಮನಾಳ್ವುದೆಂದು ಗಿರಿಶಂ ಬೇಟೆಕ್ಕೊಟ್ಟನಾ ಪಾರ್ಥನಂ

ಪರಮಾನಂದಮಯಂ ಪ್ರಸನ್ನವದನಂ ಪದ್ಮಾಪ್ತಕೋಟಿಪ್ರಭಾ
ವರಣಂ ಪನ್ನಗಭೂಷಣಂ ತ್ರಿಭುವನಾಧೀಶಂ ತ್ರಿತತ್ತ್ವಾತ್ಮಕಂ
ನಿರಘಂ ನಿಶ್ಚಲನಪ್ರತರ್ಕ್ಯಮಹಿಮಂ ಗೌರೀಶನೊಪ್ಪಿರ್ದನ
ಚ್ಚರಿವೀಱುತ್ತಖಿಳರ್ಗೆ ಸಂತತಕೃಪಾರತ್ನಾಕರಂ ಶಂಕರಂ ೪೨

———

ಪದಿನಯ್ದನೆಯದಿದೆಸಿಸುವ
ಮದನಾರಿಯ ಶಬರಲೀಲೆಯಂ ವಸ್ತುಕಮಾ
ರ್ಗದೊಳೊರೆದೆಂ ಕೆಯ್ಕೊಳ್ವುದು
ಸದಮಳಮೃಡಭಕ್ತರೆನಿಪ ವಿಬುಧರ್ ಧರೆಯೊಳ್ ೪೩

ಸಕ್ಕದಗಬ್ಬಮಂ ಮಿಸುಪ ಕನ್ನಡಗಬ್ಬಮನೊಲ್ದು ಕೋವಿದರ್
ಚೆಕ್ಕಸಮುತ್ತು ಮೆಚ್ಚಿ ಪೊಗೞುತ್ತಿರೆ ಶಂಭುಕೃಪಾವಶೇಷದಿಂ

ಮೊಕ್ಕಳವಾಗೆ ಸರ್ವರಸಮೊಪ್ಪಿರೆ ಪೇಳ್ದನಶೇಷಕಾವ್ಯಬೃಂ
ದಕ್ಕಿದು ಸಾರಮೆಂದೆನೆ ಷಡಕ್ಷರಿದೇವನದೇಂ ಪ್ರಗಲ್ಭನೋ ೪೪

ಜೇಂಗೊಡವಂತೆ ಝೇಂಕರಿಪ ತುಂಬಿಗಳಿಂಚರದಂತೆ ಪೆಂಪನಾ
ಳ್ದಿಂಗಡಲಂತೆ ಪಣ್ತಸೆವ ಮಾಮರದಂತೆ ಪಯೋಜದಂತೆ ಬೆ
ಳ್ದಿಂಗಳಸೊಂಪಿನಂತೆ ಸುಸಿಲಾಸೆಯ ನಲ್ಲಳ ನೋಟದಂತೆ ಚಿ
ತ್ತಂಗೊಳಲಾರ್ಪುದೀ ಕೃತಿ ಷಡಕ್ಷರದೇವಕೃತಂ ರಸಜ್ಞರಾ ೪೫

ಮಾಣಿಸಿ ಕಂಬಳಾಶ್ವತರ ಗಾನಮನಂತಿರವೇಟ್ಟು ವಾಣಿಯಾ
ವೀಣೆಯನುಣ್ಪುವೆತ್ತ ಸರಮಂ ಕಡೆಗಣ್ಚಿ ನಿಜಾಗ್ರದೇಶದೊಳ್
ಜಾಣೆಸೆದಿರ್ಪಿನಂ ಪಡೆದು ಪಾಡುವ ಗಂದರರಂ ಕಡಂಗಿ ಕ
ಲ್ಯಾಣಯಕಾಂತನಾಲಿಸುಗೆ ಸದ್ರಸಮೊಪ್ಪುವ ಮತ್ಪ್ರಬಂಧಮಂ ೪೬

ಇದು ನಿಖಿಲಭುವನೈಕವಲ್ಲಭಸುರಾಸುರೇಂದ್ರವರದಕರುಣಾವರಣಪರಮಶಿವಲಿಂಗತರುಣಪತಂಗಸಂಗತಮಂಗಳಹೃದಯಾರವಿಂದಬಂಧುರ ಸರಸಸಜ್ಜನಮಾನಿತೋಭಯಕವಿತಾವಿಚಕ್ಷಣ ಶ್ರೀ ಷಡಕ್ಷರಿದೇವವಿರಚಿತಮಾದ ಕಿರಾತರುದ್ರಲೀಲಾಕಥನ ವಿಪುಳಪ್ರಬಂಧಂ ಪರಿಸಮಾಪ್ತಂ.

———

## ಮಂಗಳಂ

ಬಹುತರಜನ್ಮಕೋಟಿಗಳೊಳಾರ್ಜಿಸಿದುತ್ತಮಪುಣ್ಯದೇಟಗ್ಗಿಯಿಂ
ಮಹಿಯೊಳೆ ಸತ್ಕವಿತ್ವದಿವಿಷನ್ಮಣಿ ಸಾರ್ಗುಮದೀಗುಮದ್ಭುತಾ
ವಹಸುಖಮಂ ಲಸತ್ಕವಿಗೆ ಸಾರ್ಗುಮುಜ್ಜ್ವಳಕೀರ್ತಿಯಂ ಸದಾ
ಮಹಿತಪರಾರ್ಥಮಂ ಕುಡುಗುಮೀಶ್ವರನೊಲ್ಮೆಯನುಂಟುಮಾಡುಗುಂ

# ಟಿಪ್ಪಣಿ

## ನಾಂದಿ

೧ ಶರಭವ–ಷಣ್ಮುಖ, ಅಗಜ–ಪಾರ್ವತಿ, ಇವರನ್ನು ಉತ್ಸಂಗ–ತೊಡೆಯಲ್ಲಿಉಳ್ಳ, ಅಭ್ರಾಂತ–ಭ್ರಾಂತಿರಹಿತವಾದ, ಯೋಗಾರಾಮ+ಅಂಚಿತ, ಅಂಚಿತ–ಸುಂದರವಾದ, ವಿ+ಆ+ಮಿಶ್ರ+ಅಹೀನ–ವ್ಯಾಮಿಶ್ರಾಹೀನ, ವಿ–ವಿಶೇಷವಾಗಿ, ಅಹೀನ–ಆದಿಶೇಷ, ಕಟಕ–ಹಸ್ತಾಭರಣ, ಭ್ರಾಜಿಷ್ಣು–ಪ್ರಕಾಶಿಸುವ

ಮಂಗಳರೂಪನೂ, ಷಣ್ಮುಖ ಪಾರ್ವತಿಯರನ್ನು ತೊಡೆಯಮೇಲುಳ್ಳವನೂ, ಸರ್ವವ್ಯಾಪಿಯೂ.ಗಣಪನಿಂದ ಕೂಡಿದವನೂ, ಸರ್ಪಭೂಷಣನೂ ದಿವ್ಯಾಗಮನೂ, ಶಾಂತನೂ ಆಗಿ ಪ್ರಕಾಶಿಸುವ ಗಿರಿಶನು ನಮ್ಮನ್ನು ಕಾಪಾಡಲಿ.

೨ ಕದಂಬ-ಸಮೂಹ, ಕಬರಿ–ಕೂದಲು, ಭರ ಅತಿಶಯ, ಕಳಿಂದಜ–ಕಾಳಿಂದೀನದಿಯ, ಅಂಬು–ನೀರು, ಸಾರ–ಶ್ರೇಷ್ಠವಾದ, ಕಳಾ–ಕಲೆ, ( ಅರವತ್ತು ನಾಲ್ಕು ಕಲೆಗಳು) ಅನ್ವಿತ–ಕೂಡಿದವಳು,

೩ ಶಿವಭಕ್ತಿಯೆಂಬ, ಪ್ರಮದಾ–ಸ್ತ್ರೀಯಳ, ಮುಖ+ಏಕ+ಮುಕುರ, ಮುಕುರ–ಕನ್ನಡಿ. ಅಕ್ಷರ ಸದ್ಧರ್ಮಕಳೇವರಂ ಅಕ್ಷರ–ನಾಶರಹಿತವಾದ, ಕಳೇವರ–ಶರೀರವುಳ್ಳವನು ರಾಕಾಸುಧಾಕರಂ–ಪೌರ್ಣಿಮಾಚಂದ್ರ

೪ ಕನಕಕ್ಷ್ಮಾಧರವಪ್ರ–ಮೇರುಪರ್ವತದ ಸಾನುಪ್ರದೇಶ, ವಪ್ರಕ್ರೀಡೆಯಂ ಸೀಳ್ಕಿ–ವನಕೇಳಿಯಾಡಿ, ನಾಕನದಿ–ಗಂಗೆ, ಫೂತ್ಕರಿಸಿ–ಚೀರಾಡಿಊದಿ. ಇಭವಕ್ತ್ರ–ಗಜಮುಖ, ಅಜಸ್ರ–ಸರ್ವದಾ

೫ ಸೋಮನಾಥ–ಪಾಲ್ಕುರಿಕೆ ಸೊಮನಾಥ, ಹರಿಹರ, ಹರಕವಿ– ಶೈವಕವಿಗಳಾದ, ಪದ್ಮರಸ, ಬಲವಂದು–ಪ್ರದಕ್ಷಿಸಿ. ನೆಗಟ್ದಿ ಪೆ–ರಚಿಸುತ್ತೆನೆ.

## ೧. ಭೋಗಿವಿಭೂಷನೊಪ್ಪಿದಂ

೧ ತನ್ನ ವಧುವಿನೊಡನೆಯೇ ಕೂಡಿದವನೆಂದು, ಕುಂಭಜಂ–ಅಗಸ್ತ್ಯನು, ಕುಡಿದನು. ತನ್ನ+ಅಹಿತ+ಅದ್ರಿಗೆ–ಶತ್ರುವಾದ ಬೆಟ್ಟಕ್ಕೆ ( ಮೈನಾಕ ಪರ್ವತ ) ಆಶ್ರಯದಾತನೆಂದು. ಶತ್ರುವಾದ ರಾವಣನನ್ನು, ಕಾದೊಳಕೆಯ್ದ ನೆಂದು–ಕಾಪಾಡಿದವನೆಂದು. ಹಾಲಾಹಲ–ವಿಷ.

೨ ಪರಿವೃತವಾದತದ್ವನಧಿ–ಆ ಸಮುದ್ರದಿಂದ ಬಳಸಲ್ಪಟ್ಟ, ವಾರಿ–ನೀರು, ಸಮುನ್ಮಿಳಿತ–ಚೆನ್ನಾಗಿ ಕೂಡಿದ, ಆಲವಾಲ–ಪಾತಿ, ಮಕರಂದ–ಪುಷ್ಪರಸ; ನಿರ್ಝರ–ಪ್ರವಾಹ, ವಾರ್ಧರೋತ್ಕರ–( ವಾರಿ+ಧರ+ಉತ್ಕರ)–ಮೋಡಸಮೂಹ, ಅಳಿ–ದುಂಬಿ, ಪೂತು–ಹೂಬಿಟ್ಟು, ಕರ್ಣಿಕಾರ–ಬೆಟ್ಟದಾವರೆ, ನಗ–ಮರ, ಭೂರಿ–ದೊಡ್ಡ

೩ ಸುರಪಾದಪ–ಕಲ್ಪವೃಕ್ಷ, ಮಣಿಶ್ರೇಣಿ–ರತ್ನಸಮೂಹ, ಸ್ವರ್ಧೇನು–( ಸುರಧೇನು ) ಕಾಮಧೇನು, ಖಚರರ್–ದೇವತೆಗಳು

೪ ನೀಲಮಣಿ–ಇಂದ್ರನೀಲಮಣಿ, ಅಚ್ಚರಿಯರು–ಅಪ್ಸರೆಯರು, ಪುಗೆ–ಪ್ರವೇಶಿಸಲು, ಎರಲೆ–ಜಿಂಕೆ, ಕಾಟ್ಪುರ–ಕಾಡಿನ ಪ್ರವಾಹ

೫ ಚಂದ್ರೇಂದ್ರಾಶ್ಮಪೀಠ–ಚಂದ್ರಕಾಂತ ಶಿಲೆಯ ಪೀಠ, ಕೆಯ್ಗಣ್ಮೆ–ವೃದ್ಧಿಯಾಗುವಂತೆ, ಬಿನದ–ವಿನೋದ, ಕಂದರ–ಗುಹೆ, ಗವಿ

೬ ತೊಂಡುಗೆಡೆ–ಮಾತನಾಡು ( ಗಿಳಿಯ ಕೂಗು, ಮಾತು ),

ಪಂಡಿತವಕ್ಕಿ–ಗಿಳಿ, ಸೋಗೆ–ನವಿಲು, ಅಂಡಲೆ–ಕೋಟಲೆ
೭. ಅಗಟ್ಬ್–ಕಂದಕ, ಅಳ್ವರಿ- ಕೋಟೆಯ ಗೋಡೆ
೮. ಪಳಂಚಲೆ–ವ್ಯಾಪಿಸು, ಧರ್ಮಹರ್ಮ್ಯ–ಚಿನ್ನದ ಭವನ
ಗದ್ಯ. ಪೃಥುಳ–ವಿಶೇಷ
೯. ಶಾಲ–ಪ್ರಾಕಾರ, ದಾರವಟ್ಟ–ಪುರದ್ವಾರ, ಬೆಡಂಗು -ಸೊಗಸು
೧೦. ಕುಟ್ಟಿಮ–ವೇದಿಕೆ, ವಿತರ್ದಿ- ಜಗುಲಿ, ಕವಾಟ- ಬಾಗಿಲು
ಗದ್ಯ. ಆಶೆ ದಿಕ್ಕು, ಪರಿವಿಡಿ-ಕ್ರಮ, ಪರಿಜು–ಆಕೃತಿ, ಗಾಡಿ–ಸೊಗಸು
೧೧ ಅನಘಂ–ಪಾಪರಹಿತ, ಅಜಡ–ಚೈತನ್ಯ ಸ್ವರೂಪ,
೧೨. ಬಾಂಬೋಆಶಿ-ಗ ಗ ನ ಗ ಂ ಗೆ, ಶಶಾಂಕರೇಖೆ-ಚಂ ದ್ರ ಲೇ ಖೆ, ಅಂಬಕ–ಕಣ್ಣು, ಕೃತ್ತಿವಸ್ತ್ರ-ಜಿಂಕೆಯ ಚರ್ಮ, ಕರೆ–ಗುರುತು, ಮೃಗಾಂಕಪಾಣಿ-ಈಶ್ವರ
೧೩. ಅ ಲ ರ್ಗ ಣ್–ಹೂವಿನಂತಹಕಣ್ಣು, ಜೊನ್ನ-ಬೆಳುದಿಂಗಳು, ಅಲಂಪು–ಸುಖ ವಿಷಟಂಬರಿ-ದಿಕ್ಪಾಲಕಾಗಿ ಹರಿ, ವಿಸರ-ಗುಂಪು ಅದ್ರಿಜೆ-ಪಾರ್ವತಿ
೧೪. ಅಚ್ಚರಿಯರ್- ಅಪ್ಸರೆಯರು, ಪೊನಳ್ದು-ವ್ಯಾಪಿಸಿ, ತುಂಬಿ, ಕಾಣ್ಕೆ–ಕಾಣಿಕೆ
ಗದ್ಯ. ಪ್ರಣವ–ಮಂತ್ರ, ಅಲುಪ್ತ–ಚ್ಯುತಿಯಿಲ್ಲದ, ಅಪರಿಚ್ಛಿನ್ನ-ಅಖಂಡ ಮುಗುಳ್–ಮೊಗ್ಗು, ಚಿತ್-ಅಂತರಂಗದ ಅ ರಿ ವಿ ನ ಶಕ್ತಿ, ಬಿತ್ತು-ಬೀಜ, ಪೆರ್ಮೆ-ಹಿರಿಮೆ, ಕರು-ಎರಕ
೧೫. ಅಪರ್ಣೆ-ಪಾರ್ವತಿ, ವಕ್ತ್ರ-ಮುಖ, ನೇಹ-ಸ್ನೇಹ, ಲಾಸ್ಯ-ನೃತ್ಯ

## ೨. ಮನೋರಥ ಮಿತ್ತು ರಕ್ಷಿಪೆಂ

೧ ಮೃಗಾಜಿನ-ಜಿಂಕೆಯಚರ್ಮ, ಘರ್ಮವಾರಿ-ಬೆವರು, ಇರ್ಪು-ತೇವ ಇರ್ಪುಗುಂದಿದ-ತೇವವಾರಿದ, ಅಕ್ಷಮಾಲೆ- ಜಪಸರ
ಗದ್ಯ. ತಳ್ಳಂಕ–ದಿಗ್ಭ್ರಾಂತಿ, ಮಸ್ಲಟಿ–ವ್ಯಾ ಕು ಲ, ಉಬ್ಬಸ-ವ್ಯಥೆ, ಉಬ್ಬೆಗ-ಉದ್ವೇಗ, ಪರಿಕಲಿಸು–ಸೇರಿಕೊಳ್ಳು, ಎಸಕ–ಕಾರ್ಯ,

Funding: Tattva Heritage Foundation,Kolkata. Digitization: eGangotri.



ಮಸಕ-ರೋಷ, ತಳ್ವದೆ-ತಡಮಾಡದೆ, ಮೆಯ್ಪುರ್ಚು-ಮೈದುಂಬಿ, ನಿಟಲ-ಹಣೆ, ಘಟಿತ–ಜೋಡಿಸಿದ; ಸೇರಿಸಿದ.

೨. ಜಾಹ್ನವಿ-ಗಂಗೆ, ಕಪರ್ದಿ–ಈಶ್ವರ, ಪ್ರಭಂಜನ–ಬಿರುಗಾಳಿ ಕುಶೇಶಯ-ಕಮಲ, ಅರ್ಕ-ಸೂರ್ಯ, ಶಶಾಂಕ–ಚಂದ್ರ.

೩. ಮರಾಳ-ಹಂಸ, ಮಿಹಿರ-ಸೂರ್ಯ.

೪. ನರವಾಹ–ಕುಬೇರ, ಶಕ್ರ–ಇಂದ್ರ, ಹುತವಹ–ಅಗ್ನಿ, ಧಾತ್ರ–ಬ್ರಹ್ಮ, ಪೆಳಜ್-ಹೆದರು; ತಲ್ಲಣಿಸು, ಹಮ್ಮದಂಬೋಗು-ಮೂರ್ಛೆಹೋಗು, ಪಡಲಿಡು-ಚೆದರು, ಕಾಲಕ್ಷ್ವೇಳ-ಕಾಳಕೂಟ ಹಾಲಾಹಲ.

೫. ಪಂಘ-ಹೊಡೆತ, ಔಘ–ಸಮೂಹ, ಪುಷ್ಕಲ-ಅದ್ಭುತವಾದ ಆವರ್ತಕ-ತಿರುಗುವಿಕೆ, ವ್ರಾತ–ಸಮೂಹ,

೬. ಪಳವಾತು-ವೇದ, ಸಮಂತು–ನೇರವಾಗಿ, ಮುಪ್ಪೊಟಲ್-ತ್ರಿಪುರ (ಮೂರುಪೊಟಲ್)

೭. ಅಳ್ಕಾಡು–ಲಯಹೊಂದು

೮. ಅನವದ್ಯ-ಪ್ರಶಂಸನೀಯ, ಪರಿಗತ–ಸೇರಿದ, ಅಜಂಡ-ಬ್ರಹ್ಮಾಂಡ

೯. ಆಮ್ನಾಯ-ವೇದ

೧೦. ಕರೆಗಣ್ಮವ-ಮೇರೆವರಿಯುವ

ಗದ್ಯ. ಮಗುಟ್ಟಿ–ಮತ್ತೆ, ಸಂಸ್ತವನ.ಸ್ತೋತ್ರ.

೧೧. ಬೇವಸ-ತೊಂದರೆ,

ಗದ್ಯ. ಪ್ರಗಲ್ಭ–ಪ್ರೌಢ

೧೨. ಧವ–ಪತಿ

೧೩. ಪ್ರಸ್ಫುಟ-ಎದ್ದುಕಾಣುವ, ರೋಚಿ–ಕಾಂತಿ. ಕ್ಷಣರೋಚಿ-ಮಿಂಚು, ಪ್ರ ಣು ತೋ ದ್ಯ ತ್–ಅಲೆಯಲೆಯಾದ, ಹರಿತ-ಹಸುರು, ಭೂಭೃತ್-ಬೆಟ್ಟ, ರುಂದ್ರ-ವಿಸ್ತಾರ,

೧೪. ಗೊತ್ತು-ಪ್ರದೇಶ, ಇಕ್ಕೆ-ಇರುವಸ್ಥಳ, ಸಯ್ಪು-ಪುಣ್ಯ.

೧೫ ಉದ್ಗಮ-ಮೇಲೆ ಚಾಚಿದ, ಅನೂನ-ಅತಿಶಯ

೧೬. ಜಲ್ಲಿ–ಹಬ್ಬಿಹರಡಿದ, ಕೊನರ್–ಚಿಗುರುವುದು, ಕೂವಕಂಬ–ಹಡಗಿನ ನಡುಗಂಬ

೧೮. ಸಾಮಜ-ಆನೆ, ಜೇವಣ-ತುತ್ತು.

೧೯. ದೂವ--ದರ್ಭೆ

೨೦. ಪ್ರಮುದಾಳಿ–ಮದಿಸಿದ ದುಂಬಿ (ಪ್ರಮ:ದ+ಆಳಿ), ಪ್ರಯುಕ್ತ-ತುಂಬಿದ.

೨೧. ಕದಿರ್–ಕಿರಣ, ಸವಿಥ ಸ್ಥಳ–ಸವಿತ್ತು ಬೆಳೆಯುವ ಸ್ಥಳ

೨೨. ಓವರಿ–ಮೂಲೆ, ಅಜಸ್ರ-ನಿರಂತರ

೨೩. ಶ್ಮಶ್ರು-ಮೀಸೆ

೨೪. ಅಡ್ಡಾಯುಧ-ಅಡ್ಡಾಯುಧ (ಒಂದು ಬಗೆಯ ಕತ್ತಿ) ಆಳ್ದ-ಮುಸುಕಿದ

೨೬. ವಿಧ್ಯುಕ್ತಪ್ರಕಾರ-ಶಾಸ್ತ್ರೋಕ್ತವಾಗಿ

ಗದ್ಯ ಪರಿಸರ-ಪ್ರದೇಶ, ವಿದಾರಿತ-ಕುಕ್ಕಲ್ಪಟ್ಟ, ಸಹಕಾರ–ಮಾವು, ಕ್ಷರಿತ–ಸುರಿವ, ಪರಿಕಾಲ್–ಕಾಲುವೆ

೨೭. ಸಮುದ್ಭುತ–ಮೇಲೆತ್ತಿದ, ನಿಷಂಗ–ಬತ್ತಳಿಕೆ

೨೯. ಕೂರಸಿ–ಹರಿತವಾದ ಕತ್ತಿ, ವಪು–ಶರೀರ

೩೦. ಕಿತ್ತಡಿ–ತಾಪಸ

ಗದ್ಯ. ಆಖಂಡಲ–ಇಂದ್ರ, ವಿಡಂಬನ-ವ್ಯಂಗ್ಯ ಆಕರ್ಣಿಸಿ–ಕೇಳಿ.

೩೧. ಅಟ್ಕಿಜಿವ್–ಅಕ್ಕರೆ ; ಪ್ರೀತಿ.

೩೨. ಆ ಭೀಳ-ಭಯಂಕರ, ಸಿತಗ–ಜಾರ (ವೀರ), ಶಿತಿಕಂಠ-ಈಶ್ವರ ತನುತರ–ಅಲ್ಪ

೩೩. ಪಕ್ಕಾಗು–ಈಡಾಗು

೩೪. ತಳರ್–ಹೊರಡು, ತನ್ನಗರಿಪು (ತತ್+ಅಗ+ರಿಪು) ಇಂದ್ರ ಕೀಲಕ್ಕೆ ಕಂಟಕನಾಗಿ ಬಂದ ಅರ್ಜುನ

೩೫. ಒಚ್ಚತ–ಒಪ್ಪುವಂತೆ

ಗದ್ಯ. ಪೂಣ್–ಪ್ರತಿಜ್ಞೆ

೩೯. ತುರೀಯ-ಅತ್ಯುನ್ನತಯೋಗಸ್ಥಿತಿ, ಫಲಾದನ-ಫಲಾಹಾರ
೪೧. ಉರ್ವಿದ-ವ್ಯಾಪಿಸಿದ; ತುಂಬಿದ, ಅವಗಾಹ-ಮುಳುಗು
ಷಟ್ಪದ-ದುಂಬಿ
೪೨. ಪಳಕುಗೋಡೆ-ಸ್ಫಟಿಕದಗೋಡೆ, ಬೆಚ್ಚವೋಲ್-ಬೆಸೆದಂತೆ
ಅಗಿ-ಹೆದರು, ಕಾಯ್ಪು-ಕಾವು, ಮುಸುಳ್-ಕಾಂತಿಹೀನ,
ಅತ್ತ-ಹೊರಟ, ಪ್ರವೃದ್ಧ-ವೃದ್ಧಿಯಾದ
೪೬ ಗೆಂಟಾದುದು-ದೂರ ಸರಿಯಿತು, ಸೀಕಿರಿವೋಗು-ಸೀದು
ಕಪ್ಪಾಗು, ಅಟ್ಟು-ಅದ್ದು
೪೭. ನೀಡಾಗು-ದೂರವಾಗು
೪೮. ಪ್ರಣಯ-ವಿಶ್ವಾಸ
೪೯. ರದನ-ಹಲ್ಲು
೫೦. ಅಭಿಶಂಕೆ-ಹೆದರಿಕೆ, ಅನುಗ್ರ-ಮೈದುನ
೫೧. ಆಂಪುದು-ಆಚರಿಸು, ಪದೆದು-ಪ್ರೀತಿಯಿಂದ, ಅನ್ವಿತ-ಕೂಡಿದ
೫೨. ಪ್ರಪತ್ತಿ-ತಪಸ್ಸು
೫೩. ನನ್ನಿ-ಸತ್ಯ, ಉಜ್ಜುಗಿಸು-ಉದ್ಯೋಗಿಸು : ಪ್ರಾರಂಭಿಸು,
ಮೃಗಯಾ-ಬೇಟೆ, ರತ-ಆಸಕ್ತ

## ೩. ಪಿರಿದಃ ಡುದುಬೇಂಟೆಯಬ್ಬರಂ

೧. ಸಬ್ಬವಕಾಱ-ಮೇಳದವರು ಡಿಂಡಿಮ- ಒಂದುಬಗೆಯ ವಾದ್ಯ
ಕಟಕ- ಸೈನ್ಯ, ನಿಕ್ವಣ- ಧ್ವನಿ
೨. ಬಂಬಲ್-ಗೊಂಚಲು, ತೆಳ್ಪರೆ-ತೆಳ್ಳನೆಯ ಚಂದ್ರ (ಪೆಜಿ-
ಚಂದ್ರ) ಬಗ್ಗ-(ವ್ಯಾಘ್ರ) ಹುಲಿ' ಸಮ್ಮ- ಚರ್ಮ, ಕೃತ್ತಿ-ಚರ್ಮ
೩. ಅರೆಯೊಡಲಾದ-ಈಶ್ವರನ ಅರ್ಧಾಂಗಿಯಾದ, ಕಾಳಿ-ಪಾರ್ವತಿ,
ಕಳೇವರ- ಶರೀರ, ನಿರ್ಜರ-ದೇವತೆ
೪. ಅಳಿರುಚಿ-ದುಂಬಿಗಪ್ಪು. ಭಿಲ್ಲಿ-ಬೇಡಿತಿ, ನೆಗಟ್ಟು-ಮಾಡು
೫. ಕರ್ಣಪೂರ-ಕಿವಿಯಾಭರಣ, ಲಸಿತ-ಹೊಳೆಯುವ, ಕರ್ಣಿಕಾ-

Funding: Tattva Heritage Foundation,Kolkata. Digitization: eGangotri.



ಕಮಲಷಂಡ-ಕಮಲಪಂಕ್ತಿ, ಕಾಂಚಿ-ಡಾಬು, ಮರಂದ-ಜೇನು, ಒಳ್ಪಳೆ-ಒಳ್ಳೆಯ ಬಳೆ, ಪುಳಿಂದಿ-ಬೇಡಿತಿ

೬. ಅಸಿತ-ಕಪ್ಪು, ಚೊಲ್ಲೆಯ- ತುರುಬಿನ ಕೊನೆ, ತಮಾಲ-ಹೊಂಗೆ ಪೀಲಿ-ನವಿಲು ಗರಿ, ಕಜ್ಜಲ-ಕಾಡಿಗೆ, ಮಸಿ, ಅಗಾಹಿತರತ್ನ-ಇಂದ್ರನೀಲಮಣಿ

೭. ಪಗಿಲ್ತು-ಗರಿಗೆದರಿದ

೮. ಅಮರ್ಕೆ- ಹೊಂದಿಕೆ, ಜಲ್ಲಿ-ಹಬ್ಬಿ ಹರಡಿದ

೯ ಕಯ್ದಾಳ-ಕಯ್ಯ ತಾಳ

ಗದ್ಯ ಸಂದೋಹ-ಗುಂಪು

೧೦ ಆನಕ-ಕಮಟೆ, ಪೊಂಬರಿಯಣ-ಹೊನ್ನ ಹರಿವಾಣ, ಭಾರ್ಗವಿ-ಲಕ್ಷ್ಮಿ

೧೨ ಕೆರ್ಪು-ಪಾದರಕ್ಷೆ, ಗೊಂಡೆಯ-ಗೊಂಚಲು, ನಿಗ್ಗವ-ಆನೆಯದಂತ

ಗದ್ಯ ಬಿಯದ-(ವ್ಯಾಧ) ಬೇಡರು, ಕಟಕ-ತಪ್ಪಲು,

೧೩ ಕಿಂಶುಕ-ಮುತ್ತುಗ

೧೪ ಶಶಾಂಕ-ಚಂದ್ರ, ಅಂಶು-ಕಿರಣ, ಖದ್ಯೋತ-ಸೂರ್ಯ

ಗದ್ಯ ತೆಱಪು-ಅವಕಾಶ, ಗಹನ-ಕಾಡು

೧೫ ದಾನರಸ-ಮದೋದಕ, ರಸೆ-ನೆಲ, ಕರ್ಣವಾಳ-ಕಿವಿಯವಿಸ್ತಾರ ಬಿಸಕಾಂಡ-ತಾವರೆಯದಂಟು

೧೬ ಪ್ರತಿವಿಧಾನ-ಪ್ರತಿರೂಪು, ಸೋವು-ನಿವಾರಿಸು, ಶೈವಲ-ಪಾಚಿ ಮಿಳಿರ್-ಅಲ್ಲಾಡು ಕರೇಣು-ಹೆಣ್ಣಾನೆ, ಸಿಂಧುರ-ಆನೆ

ಗದ್ಯ ಪಣೆ-ಮಿಗವಕ್ಕೆ, ಮೃಗಗಳು ವಾಸಿಸುವ ಸ್ಥಾನ

೧೭ ಸೊವಡು- ಸೊಗಡು, ವಾಸನೆ

೧೮ ಒಕ್ಕುದು-ಸುರಿಯಿತು, ಲುಲಾಯ-ಕಾಡುಕೋಣ, ಆಸ್ಯ-ಮುಖ ದೂರ್ವೆ--ದರ್ಭೆಹುಲ್ಲು

೧೯ ಸರಳಿಸು-ನೆಗೆದು ಓಡುವರೀತಿ, ಏಣ-ಜಿಂಕೆ, ಖಡ್ಗಿ-ಖಡ್ಗಮೃಗ ಮರೆ-ಒಂದು ಬಗೆಯ ಜಿಂಕೆ, ಕಡಂಗಿ-ಕೋಪಿಸಿ

೨೦ ಬೆಳ್ವಾರ-ಬಲೆ, ಕುಣಿಕೆ, ನಿಕುಂಜ-ಪೊದರು, ಸೋದಿಸು ಶೋಧಿಸು, ಹುಡುಕು, ಸಿದರ್ಾಣ—ನೀರಿನನೆಲೆ, ಉಲಿಪು—ಉಲಿಹು, ಶಬ್ದ, ಆಕರ್ಣಿಸು-ಕೇಳು, ಉನ್ಮ್ಯಾತ್—ಎತ್ತರವಾದ ಭೂಜ—ಮರ

೨೧ ಕಱುತ್ತು—ಕೋಪದಿಂದ, ಇಟ್ಟಿ—ಈಟಿ, ಆರ್—ಆರ್ಭಟಿಸು

೨೨ ಕಿಬ್ಬರಿ-ಪಕ್ಕೆ, ಕೊಣಕಿಡು- ಹಾರು, ಮೃಗೀ-ಜಿಂಕೆಗಳು

೨೩ ನೀಡಡಿಗೊಳ್—ಒಂದು ರೀತಿಯ ನಿಲವು, ದೊಣೆ—ಬತ್ತಳಿಕೆ ಪೊಡರ್ಪು—ರಭಸ; ಕಟಕಾಮುಖ-ಬಿಲ್ಲಿನಹಗ್ಗ

೨೪ ಕುನುಂಗಿ—ಕುಗ್ಗಿ, ಮಾನ—ಅಳತೆ, ಪ್ರಮಾಣ, ಪಿಂಗಳ—ಕೆಂಪಾದ

೨೫ ಸುಱುಕಿಡು-ಒಂದು ಬಗೆಯ ಶಬ್ದ ಮಾಡು, ಸೈರಿಭ—ಕೋಣ

೨೬ ರೊಂಕಿಡು—ಗುಟುರುಹಾಕು, ಆರ್ಪು-ಪರಾಕ್ರಮ

೨೭ ದ್ವಿಪವೈರಿ—ಸಿಂಹ, ಧೀವರ-ಶೂರ

೨೮ ಉತ್ಕಟಿಸು-ರೇಗು, ನೆಗಪು—ಮೇಲೆತ್ತು, ಅದಟು—ಪರಾಕ್ರಮ

ಗದ್ಯ ನಿಳಿಂಪ- ದೇವತೆ

೨೯ ಚಂದ್ರಾಶ್ಮ-ಚಂದ್ರಕಾಂತಶಿಲೆ, ತಾಲವೃಂತ—ತಾಳೆಯ ಎಲೆ

## ೪. ಈತನೊಳಾಂ ಪವಿನೋದವುಂಟು

೧ ಆಖರ್ವ—ಅಗಣಿತ ವಿಶೇಷ, ಇಱುಂಬು-ಕಣಿವೆ, ಸುಪರ್ವ—ದೇವತೆ

೨ ಸೈರಿಭ—ಕೋಣ ಭರಿಕ್ಕೈ-ಸೊಂಡಿಲು, ಪೃಥು-ದೊಡ್ಡ

೩ ವಿಸ್ಫುಲಿಂಗ-ಕಿಡಿ

೪ ಖರಖುರ—ಕಠಿಣವಾದ ಗೊರಸು, ಕುಜ-ಮರ, ಬೆರ್ಚಿಸು—ಬೆದರಿಸು, ಜವ—ವೇಗ, ಎಕ್ಕಲ-ಹಂದಿ

ಗದ್ಯ ಕಿಟಿ-ಹಂದಿ, ಸೌರಂಭ- ಸಂಭ್ರಮ, ಕನಲ್ಕೆ—ಕೋಪ

೬ ಪಡಲಿಡು—ಉರುಳಿಬೀಳು

೭ ಜಾಯಿಲ—ಬೇಟೆನಾಯಿ, ಇಱಿವಿಟ್ಟ-ಇರಿಯುವ ಈಟಿ, ಕೇಣ—ಅಸೂಯೆ—ಅಹಂಕಾರ

೯ ಲುಬ್ಧಕ—ಬೇಡ, ಅಸಿ—ಕತ್ತಿ, ಝುಂಕಿಸು- ಝಳಪಿಸು

೧೦ ಬರಿ-ಪಕ್ಕೆ, ಅಡಗು-ಮಾಂಸ, ಅಸವಸ-ಸಂಭ್ರಮ

೧೧ ಘನಾಘನ-ಮಳೆಗಾಲದಮೋಡತುಂಡಮುಂಬಿದಿರ್ದ-ಬಾಯಿನ್ನು ಬಿಚ್ಚಿ,

೧೨ ಅಚ್ಚಿಗ-ಕೋಟಲೆ

ಗದ್ಯ ಬವರಿವರಿ-ಬುಗುರಿಯಂತೆತಿರುಗು. ಅಭಿಷಂಗ-ಬಯ್ಗುಳ, ಕ್ಷತಾಂಗ-ಕ್ಷಯಿಸಿದಂಗ, ಗುಣ-ಬಿಲ್ಲಿನಹುರಿ,

೧೩ ಉಡು-ನಕ್ಷತ್ರ, ಉಡುಗು-ಮಡಿಸು

೧೪ ಅಣಿಯರ-ಹೆಚ್ಚು, ಮಾರ್ಗಣ-ಬಾಣ

ಗದ್ಯ ಬಾಣಾಸನ-ಬಿಲ್ಲು, ತಿರುವಾಯ್-ಬಿಲ್ಲಿನಬಾಯಿ

೧೫ ತರಕ್ಷು-ಹುಲಿ ಸಂಕ್ರಂದನ-ಇಂದ್ರ ಸಂಕ್ರಂದನವೈರಿ-ವೃತ್ರಾಸುರ ವೆಗ್ಗಳ-ಹೆಚ್ಚುಗಾರಿಕೆ

೧೬ ಭ್ರುಕುಟಿ-ಹುಬ್ಬು

ಗದ್ಯ ಹಮ್ಮಡ-ಮೂರ್ಛೆ

೧೮ ಸಿಡುಂಬು-ಮುಳ್ಳುಕಂಟೆ, ಕುತ್ತುಬು-ಹೊದರು ನಾನಲ್-ಜೊಂಡು ಬೆಳೆದ ಜಾಗ

೧೯ ಅಧಿಜ್ಯ-ಹೆದೆಯೇರಿಸಿದ

ಗದ್ಯ ಉಪಹತಿ-ಕೋಟಲೆ, ಮೂಡಿಗೆ-ಬತ್ತಳಿಕೆ ಕೊಪ್ಪು-ಬಿಲ್ಲಿನ ತುದಿ ನೆಲೆ-ತಕ್ಕಸ್ಥಳ

೨೧ ತವಿಸು-ನಾಶಪಡಿಸು ಅವಿಕಲ-ಕೊಂಚವೂ ಅಸ್ಥಿರನಾಗದೆ

೨೩ ಪರುಟವಿಸು-ವಿಸ್ತರಿಸು ಬಲಾಹಕ-ಮೋಡ

೨೪ ಗೊರವ-ಸನ್ಯಾಸಿ

ಗದ್ಯ ಏಳಿದಲಿಣ್ಣಕ ಹಾಸ್ಯ

೨೬ ಟಿಕಿವ್ಯಂಗ್ಯ ಮೃಗಾಜಿನ-ಜಿಂಕೆಯ ಚರ್ಮ ಶರಾಸನ-ಬಿಲ್ಲು.

೨೮ ಆಹವಯುದ್ಧ

೩೧ ಭ್ರುಕುಟಿ–ಹುಬ್ಬು ಘರ್ಮಾಂಬು–ಬೆವರಹನಿ ಶೋಣಾಕ್ಷಿಕೋಣಂ-
ಕೆಂಗಣ್ಣುನೋಟ, ಜ್ಯಾ–ಬಿಲ್ಲಿನಹುರಿ

೩೨ ಅಳುಂಬ–ಅತಿಶಯ

೩೪ ಕಂಜಸಖ–ಸೂರ್ಯ

೩೫ ಆಂಪ-ಎದುರಿಸುವ

## ೫. ರಿಪುಜಯಮನಿತ್ತುಪೊರೆಪುರಮಥನಾ

ಗದ್ಯ ತಿರು-ಬಿಲ್ಲಿನ ಹುರಿ

೧ ಪೊರೆ–ಪಕ್ಕ

೩ ಎಸುಗೆ-ಬಾಣಪ್ರಯೋಗ

೫ ಕಳಂಬ-ಬಾಣ

೮ ನಿಷಂಗ-ಬತ್ತಳಿಕೆ

೯ ಪಟು-ಅಪವಾದ, ನಿಂದೆ

೧೦ ಕನಲ್ಕೆ-ಕೋಪ

ಗದ್ಯ ಕಷಾಯಿತ-ಕದಡಿದ ?

೧೧ ಒಳಱು-ಗರ್ಜಿಸು ಈಟ್ಟುಕೊಳ್ ಎಳೆದುಕೊಳ್ಳು

೧೨ ಸಾಧ್ವಸ-ಆಯಾಸ ಭಯ

೧೭ ಸಮುದಂಡಿ-ಒಂದೇಸಮನೆ

೧೮ ಗೆಂಟು-ದೂರ, ಕಾದಲೆ–ಪ್ರಿಯೆ

೨೦ ಸಪತ್ನ-ದಾಯಾದರು

೨೧ ಅಭ್ಯರ್ಥನ-ಕೋರಿಕೆ, ಬೇಡಿಕೆ

ಗದ್ಯ ಉದೀರ್ಣ-ವಿಶೇಷ, ಪರುಶ-ಕಠಿಣ ಪಾಟಲಿತ–ಕೆಂಪಾದ, ಆಸ್ಫಾಲನ
ತಟ್ಟುವಿಕೆ

೨೨ ಉಳ್ಕು-ಉಕ್ಕು, ಚೆದುರು

೨೩ ಯುಗ್ಮ-ಜೊತೆ, ಅಲಘು-ಲಘುವಲ್ಲದ್ದು, ಮಹತ್ತಾದ್ದು

೨೪ ಬಿದಿರ್ಚು-ಬಿಚ್ಚು, ಅಪ್ಪಳಿಸು-ಅಪ್ಪಳಿಸು, ತಳ್ಕೆ-ತೆಕ್ಕೆ, ಕುನುಂಗಿ-ಕುಗ್ಗಿ, ಪಯ್ಸರಿಸು-ಜಾರು, ಭಿನ್ನಣ-ವಿಜ್ಞಾನ, ಚಮತ್ಕಾರ

೨೬ ಸ್ಫಟಿ-ಹೆಡೆ, ಪಯೋಧರ-ಮೇಘ, ಜುಗುಬ್-ಜಾರು

೨೭ ಮುಡುಪು-ಹೆಗಲು, ಆಳಿಕ-ಹಣೆ

೨೮ ಕ್ಷತರೇಖೆ-ಗಾಯದಗೆರೆ, ಶತಮುಖ-ಇಂದ್ರ

೨೯ ಮುಂಚು-ಮುಂದೆಬರುವುದು, ಪಾಕರಿಪು-ಇಂದ್ರ

೩೧ ಕೇಣ-ಮತ್ಸರ

೩೩ ಬಟಿತುದು-ಬತ್ತಿತು, ಬಱಿನಾದುದು-ಕಡಿಮೆಯಾಯಿತು, ನೆರ್ಗಿದುದು-ನೆಗ್ಗಿತು, ಎಱಕ-ಪತನ, ಹೇವ-ಅವಮಾನ

೩೪ ಆಹವ-ಯುದ್ಧ, ಎಸಕ-ಕಾರ್ಯ

೩೭ ಸಮುಲ್ಲಸಿತ-ಹೆಚ್ಚು ಪ್ರಕಾಶಮಾನವಾದ

೩೮ ಕಾಟ್ಬಿಯದ-ಕಾಡಿನ ಬೇಡರವನು

೩೯ ಪಡಿಮಾತು-ಪ್ರತಿಮಾತು, ಬೂತಾಟ-ಮೋಸದ ಆಟ

೪೧ ಪನ್ನತಿಕೆ-ಪರಾಕ್ರಮ

## ೬. ಬೀಳ್ಕೊಟ್ಟನಾಪಾರ್ಥನಂ

೧ ಪ್ರೋನ್ನತಿ-ಅತಿಶಯ, ಸನ್ನಿದ-ಸನ್ನಿಹಿತ, ಒದಗು

೨ ಅಣಿಯರ-ಸಂಭ್ರಮ, ಅತಿಶಯ

೩ ಸಮ್ಯಕ್-ವಿಸೇಷವಾದ, ಶುದ್ಧವಾದ, ಶೀರ್ಷ-ಶಿರೋಭಾಗ, ಪ್ರಾಂಚತ್-ಶೋಭಿಸುವ

೪ ಈಕ್ಷಣ-ನೋಟ, ಪಯಶ್ಚರ-ಮೀನು

೬ ಪಿಡಿದೆಱಿದಂತೆ-ಬಾಗಿಲುತೆರೆದಂತೆ, ಇಡಿಕಿಱಿ-ತುಂಬು, ಮಡಲ್-ವ್ಯಾಪಿಸು

೭ ಬೀತುದು-ಮಾಯವಾಯಿತು, ತಱಿಸಂದು-ನಿಶ್ಚಯಿಸಿ

೮ ಉಱುವೆಳಗು-ಉಳಿದಬೆಳಕು, ಅಳುರ್-ವ್ಯಾಪಿಸು,

೧೨ ಜ್ವಲನಾಕ್ಷ-ಹಣೆಗಣ್ಣುಳ್ಳವನು (ಈಶ್ವರ), ಸ್ತವನ-ಸ್ತೋತ್ರ

೧೩ ಪೊಣರ್-ಹೋರಾಡು, ಭಾಜನ–ಪಾತ್ರ

೧೫ ಇಂಬು–ಆಶ್ರಯ, ರಯ–ವೇಗ

೧೭ ಅಲಂಪು–ಸೊಗಸು

೧೮ ವಿತತ–ಸೂಸುವ, ಸುಲಭಿ–ಸುಗಂಧ, ಚಂಚರೀಕ–ದುಂಬಿ

ಗದ್ಯ ಸರುಜಂ–ರೋಗಿಯಾದವನು, ಕಡವರ–ಚಿನ್ನ

೨೨ ಸಯ್ಪುರಿ–ವ್ಯಾಪಿಸು

೨೩ ಆವಿಲ–ಮಲಿನ

೨೫ ವ್ಯೋಮಕಚ–ಆಕಾಶವನ್ನೇ ತಲೆಗೂದಲಾಗಿ ಉಳ್ಳ, ಸುತ್ರಾಮ–ಇಂದ್ರ

೨೬ ಪಂಚೀಕರಿಸು–ಐದು ರೀತಿ ವಿಭಾಗಿಸು, ಪ್ರದ್ಯೋತ–ಕಾಂತಿ, ಗುಪ್ತಿ–ಅಂತರಿಕವಾಗಿ

೨೭ ವಹಿತ್ರ–ಹಡಗು, ನಿಕ್ಕುವ–ನಿಶ್ಚಯ

೩೧ ಧೀಧಿತಿ–ಪೀಪ್ತಿ, ಬೆಳಕು. ಬಾಸುಟಿಗೆ–ಬೊಬ್ಬೆ

೪೨ ಅಪ್ರತರ್ಕ್ಯ–ತರ್ಕಾತೀತ

೪೪ ಸಕ್ಕದ–ಸಂಸ್ಕೃತ, ಉತ್ತು–ಹೊಂದಿ, ನೊಕ್ಕಳ–ವಿಶೇಷ

೪೫ ಇಂಗಡಲು–ಕ್ಷೀರಸಾಗರ

೪೬ ಮಾಣಿಸಿ–ನಿಲ್ಲಿಸಿ, ಕಂಬಲಅಶ್ವತರ–ಶಿವನಕರ್ಣಾಭರಣವಾದ ನಾಗರು, ಗಾಯಕರು